# ಕೊರವಂಜಿ




ಜುಲೈ ೧೯೪೩

ಮಾಸ ಪತ್ರಿಕೆ


ಸಂಪಾದಕರು :
ಶಿ|| ರಾ. ಶಿ.

ಚಿತ್ರಕಾರರು :
ಶ್ರೀ|| ಆರ್. ಕೆ. ಲಕ್ಷ್ಮಣ್


ಬರಹಗಾರರು :

ಶ್ರೀ|| ನಾ. ಕ.
ಶ್ರೀ|| ಬಿ. ವಿ. ಈಶ್ವರ್
ಶ್ರೀಮತಿ ಜ. ರಾ. ಶ್ರೀ.
ಶ್ರೀ|| ಎಂ ವಿ. ನಾ.
ಶ್ರೀ|| ಎ. ಕೆ.
ಶ್ರೀ|| ಎ. ಎಸ್. ಆರ್.
ಶ್ರೀ|| ಶರತ್
ಶ್ರೀ|| ಬೀರಣ್ಣ
ಶ್ರೀ|| ಬಿ. ವಿ. ಸು.
ಶ್ರೀ|| ನಾ. ಪಂ.

---

ಬಿಡಿ ಪತ್ರಿಕೆ -- ಕೇವಲ ಎರಡಾಣೆ

ಶಿಷ್ಟ ನಗೆಯ ಮಾಸ ಪತ್ರಿಕೆ.

# ಕೊ ರ ವಂ ಜಿ

ಕೊರವಂಜಿಯು ತಿಳಿನಗೆಯ ಸಚಿತ್ರ ಮಾಸಪತ್ರಿಕೆ. ತಿಳಿಹಾಸ್ಯದ ಲೇಖನಗಳು, ಹರಟೆಗಳು, ಅಣಕವಾಡುಗಳು, ನಗೆ ಹಾಡುಗಳು ಇವುಗಳಿಗೆ ಸರ್ವದಾ ಸುಸ್ವಾಗತವುಂಟು. ಆದರೆ ವ್ಯಕ್ತಿಯನ್ನುದ್ದೇಶಿಸಿ ಬರೆದ ಲೇಖನಗಳಿಗೆ ಎಡೆಯಿಲ್ಲ.

ಲೇಖನಗಳನ್ನು ಕಳುಹಿಸುವವರು ತಮ್ಮಲ್ಲಿ ಒಂದು ಪ್ರತಿಯನ್ನಿಟ್ಟುಕೊಂಡರೆ ಬಹಳ ಒಳಿತು. ಸುಲಭವಾಗಿ ಓದುವಂತೆ ತಿಳಿಬರಹದಲ್ಲಿ ಬರೆದರೆ, ಅಚ್ಚಾದಾಗ ತಪ್ಪುನೆಪ್ಪುಗಳು ಕಡಿಮೆಯಾಗುವುವು.

ಸಂಪಾದಕೀಯ ಪತ್ರವ್ಯವಹಾರಗಳನ್ನು ಸಂಪಾದಕರಲ್ಲೂ ವ್ಯವಸ್ಥಾಪಕರಲ್ಲಿ ಮಿಕ್ಕ ವಿಚಾರಗಳನ್ನೂ ಪ್ರಸ್ತಾಪಿಸಬೇಕು.

ಬಳೇಪೇಟೆ, ಬೆಂಗಳೂರು ಸಿಟಿ.

**ವಾರ್ಷಿಕ ಚಂದಾ ಅಂಚೆ ಮೂಲಕ ರೂ. ೨—೦—೦**

**ಬಿಡಿ ಪ್ರತಿ ಕೇವಲ ಆಣೆ ೦—೨—೦**

---

## ವಿ ಷ ಯಾ ನು ಕ್ರ ಮ ಣಿ ಕೆ

ಭಾರತೀಯ ಕಾರ್ಮಿಕರಿಂದ

ಭಾರತೀಯ ಬಂಡವಾಳಗಾರರಿಂದ

ಭಾರತೀಯ ಕಲಾಕೌಶಲ್ಯದಿಂದ

ಕೂಡಿರುವುದೇ



# ಬೆಂಗಾಲ್ ಲ್ಯಾಂಪ್ಸ್

ತಯಾರಿಕೆಯ ವೈಶಿಷ್ಟ್ಯ



ಭಾರತದಲ್ಲೆಲ್ಲಾ ಉತ್ತಮವಾದುದೆಂದು

ಖ್ಯಾತಿಪಡೆದಿದೆ



# ಜ ಬ್ ಕೊ

ಶಾಯಿಯನ್ನು

ಉಪಯೋಗಿಸಬಾರದೇ ?




ಸಂಪುಟ ೨] ಕೊರವಂಜಿ—ಜುಲೈ ೧೯೪೩ [ಸಂಚಿಕೆ ೪

# ಕು ಹ ಕಿ ಡಿ ಗ ಳು

"ಅಕ್ಕಿಪೇಟೆಯ ಹೆಸರನ್ನು ಈಗಿನ ಕಾಲಕ್ಕನುಗುಣವಾಗಿ ಮಾರ್ಪಡಿಸುತ್ತಾರೆಂಬ ಸುದ್ದಿಯು ನಿರಾಧಾರವಾದುದೆಂದು ತಿಳಿಯಬಂದಿದೆ."

* *

ಶ್ರೀ ವೇವೆಲ್ಲರು ವೈಸರಾಯರಾದರಂತೆ.

—ಅಂದ ಮೇಲೆ ಸಾರ್ವಜನಿಕರಿಂದ ಸೈನಿಕರಿಗೆ ಆಗುತ್ತಿದ್ದ ತೊಂದರೆಗಳಾದರೂ ಇನ್ನು ಮೇಲೆ ಕಡಿಮೆಯಾಗುವುದು ಖಂಡಿತ.

* *

ಜರ್ಮನಿಯಲ್ಲಿ ೭೪ ಲಕ್ಷ ಜನ ಈ ವರ್ಷ ಮಡಿದಿರುವರಂತೆ.

—ಏನು ಮಹಾ! ನಮ್ಮೂರಲ್ಲಿ ಅಷ್ಟು ಜನ ಹೊಟ್ಟೆಗಿಲ್ಲದೆ ಸತ್ತಿದ್ದಾರೆ!

* *

"ನ್ಯಾಯವಿಧಾಯಕ ಸಭೆಯ ಸದಸ್ಯರು ಹಲವರು ಸಾಯಂಕಾಲ ಇನ್ನೊಂದು ನಾಟಕಕ್ಕೆ ಹೋದರು" ಎಂದು ಸುದ್ದಿ.

—ಹೀಗೆ ಹೇಳುವುದು ನಮಗೇನೋ ಚೆನ್ನಾಗಿ ಕಾಣುವುದಿಲ್ಲ.

* *

ಸೌದೆ ಬೆಲೆ ಇಷ್ಟು ಏರುವುದಕ್ಕೆ ಏನು ಕಾರಣ ಎಂದು ಬಾತ್ಮೀದಾರರೊಬ್ಬರ ಪ್ರಶ್ನೆ.

—ಕಾರಣ ನಮಗೆ ತಿಳಿಯದು. ಆದರೆ ಅದನ್ನು ತರಕಾರಿಯೆಂದು ಉಪಯೋಗಿಸುತ್ತಾರಾದ್ದರಿಂದ ಹೀಗಾಗಿದೆ ಎಂಬುವುದು ಸುಳ್ಳು ಸುದ್ದಿ.

ಹೆಬ್ಬಿ ಗುಬ್ಬಾಲಿಯಲ್ಲಿ ಈಗ ಮೂರು 'ಕಂಪೆನಿಗಳು' ಆರಂಭವಾಗಿ ಮೂರು ತಿಂಗಳಲ್ಲೇ ದಿವಾಳಿಯೂ ಆದುವಂತೆ.

—ನಾಗರಿಕತೆ ಹಳ್ಳಿಗಳಲ್ಲೆಲ್ಲಾ ಚೆನ್ನಾಗಿ ಹರಡುತ್ತಿದೆ.

* *

ಬಾಯಿನಲ್ಲೇ ಹಾರ್ಮೋನಿಯಂ ಬಾರಿಸಿದಂತೆ, ಗಾನಮಾಡುವುದನ್ನು ಒಬ್ಬನು ಕಲಿತಿದ್ದಾನೆ.

—ಹೀಗೆ ಮಾಡಿದರೆ ಎರಡೂ ಕೈಗಳೂ ಆತ್ಮ ಸಂರಕ್ಷಣೆಗೆ ಅನುಕೂಲ ವಾಗಿರುತ್ತವೆ.

* *

ಶ್ರೀಯುತ ಬಿರ್ಲಾರವರು ಪದ್ಯಗಳನ್ನು ಬರೆಯಲು ಆರಂಭಿಸಿದ್ದಾರೆ.

—ಆದರೂ ಅವರು ಪಾಪರಾಗುತ್ತಾರೆಂಬುದಕ್ಕೆ ಸೂಚನೆಗಳಿಲ್ಲ.

* *

"ಸಿದ್ಧವಾದ ಉಡುಪುಗಳನ್ನು ಕೊಂಡುಕೊಳ್ಳಿ—ಷರಟುಗಳು ೨ ರೂಪಾಯಿ ಬಹಳ ದಿನಗಳಿರುವುದಿಲ್ಲ—" ಜಾಹಿರಾತು.

—ಇದಕ್ಕಿಂತಲೂ ಸತ್ಯಯುತ ಜಾಹೀರಾತು ಬೇಕೆ?

* *

'ರಷ್ಯಾದವರ ಸ್ವಾತಂತ್ರ್ಯ ದಿನಾಚರಣೆಯನ್ನು ಇಡೀ ಭಾರತದಲ್ಲಿ ಯೋಗ್ಯ ರೀತಿಯಲ್ಲಿ ಆಚರಿಸಿದರು' ಸುದ್ದಿ.

—ಇಡೀ ಭಾರತದಲ್ಲಿ, ತಮ್ಮ ಸ್ವತಂತ್ರ ದಿನಾಚರಣೆಯನ್ನು ಆಚರಿಸಲಾಗ ದಿರುವಾಗ, ಇನ್ನು ಯಾವುದಾದರೂ ದೇಶದನ್ನಾದರೂ ಆಚರಿಸಲು ಅನುಮತಿ ಇದೆಯಲ್ಲಾ.

* *

ವಿಲಾಯಿತಿಯಲ್ಲಿ ಸ್ತ್ರೀಯರೆಲ್ಲರೂ ಶೈವ ಮತಾವಲಂಬಿಗಳಾಗಿದ್ದಾರಂತೆ.

—ಹೌದು, ಅವರುಗಳು ವೀಭೂತಿ ಉಪಯೋಗಿಸುತ್ತಾರಂತೆ—ಗೃಹಿಣಿ ಯರೂ ಕೂಡ.

* *

——o——

# ಪ್ರ. ಪ್ರ. ಸಭೆಯಲ್ಲಿ ಸುರುಸುರುಬತ್ತಿ

(ಸ್ವಂತ ಬಾತ್ಮಿ)

ಬಾಲಕಿಯರಿಗೆ ಗೃಹ ವಿಜ್ಞಾನ, ನರ್ಸರಿ ವಿಜ್ಞಾನ ಶಿಕ್ಷಣ ಕೊಡಬೇಕು; ಬಾಲಕರಿಗೆ ಮಿಲಿಟರಿ ಶಿಕ್ಷಣ ಒತ್ತಾಯವಾಗಿ ಕೊಡಬೇಕು.

—ಮೆಂಬರೊಬ್ಬರು.

—ನಿಜ! ಬಾಲಕಿಯರಿಗೆ ಅಷ್ಟೆಲ್ಲ ಹೇಳಿಕೊಟ್ಟ ಮೇಲೆ, ಅವರೊಂದಿಗೆ ಸಂಸಾರ ಹೂಡಬೇಕಾದ ಹುಡುಗರಿಗೆ ಮಿಲಿಟರಿ ಶಿಕ್ಷಣ ಅತ್ಯಗತ್ಯ.

*　　　*　　　*

ಸಂಸ್ಥಾನದ ಸೇಂದಿ ಅಂಗಡಿಗಳ ಸಂಖ್ಯೆಯನ್ನು ಕಡಿಮೆ ಮಾಡುವ ನೀತಿಯನ್ನೇ ಮೈಸೂರು ಸರ್ಕಾರದವರು ಮೊದಲಿನಿಂದಲೂ............ಇತ್ಯಾದಿ.

—ಅಧಿಕಾರಿಗಳೊಬ್ಬರು.

—ಹಾಗೆಯೇ, ಅಂಗಡಿಗಳಲ್ಲಿರುವ ಸೇಂದಿಯನ್ನು ಕಡಿಮೆ ಮಾಡುವ ನೀತಿಯನ್ನೇ ಮೈಸೂರು ಸಂಸ್ಥಾನದ ಪ್ರಜೆಗಳಲ್ಲನೇಕರು ಮೊದಲಿನಿಂದಲೂ............ ಇತ್ಯಾದಿ.

*　　　*　　　*

ಪೆನ್ಷನ್ ಪಡೆಯುವವರು ಸಾಧಾರಣವಾಗಿ ವಯಸ್ಸಾದವರಾದ್ದರಿಂದ ಅವರಲ್ಲಿ ಬಹುಮಂದಿ ಬೇರೆ ಕೆಲಸಮಾಡಲು ಅರ್ಹರಲ್ಲ ಎಂಬುದನ್ನು ಒಪ್ಪುವಿರೋ?

—ಪ್ರಶ್ನೆದಾರರೊಬ್ಬರು.

—ನಾವೊಪ್ಪಿದರೂ ಇತರ ಸಂಸ್ಥಾನದವರು ಒಪ್ಪಬೇಕಲ್ಲ!

*　　　*　　　*

ಸರ್ಕಾರದವರು ಉಪಾಧ್ಯಾಯರಿಗೆ ಕೊಡುವ ಸಂಬಳವನ್ನು ತಪ್ಪಿಸಿ ರೈತರೇ ಅವರಿಗೆ ೧೦-೨೦ ಎಕ್ರೆ ಜಮೀನನ್ನು ಕೊಟ್ಟರೆ ಅವರು ಸುಖವಾಗಿ ಜೀವನ ಮಾಡುತ್ತಾರೆ.

—ಮೆಂಬರೊಬ್ಬರ ಅಮೂಲ್ಯ ಸಲಹೆ.

—ಸಂಬಳ ತಪ್ಪಿಸಿಬಿಟ್ಟರೆ ಅವರಿಗೆ ಅಷ್ಟೊಂದು ಜಮೀನು ಬೇಕಾಗುವುದಿಲ್ಲ! ೬ ಅಡಿ ಉದ್ದ ೩ ಅಡಿ ಅಗಲ ಸಾಕಾದೀತು!

*　　　*　　　*

"ಹೊಸ ಜರೂರು ಹುಕುಂಮಿನ ಪ್ರಕಾರ ತಕಾವಿ ಹಾಗೂ ಜಮೀನು ಅಬಾದ ಸಾಲ ವಗೈರೆ ಸುಸ್ತಿ ಹಾಗೂ ಚಾಲ್ತಿ ಬಡ್ಡಿ ವಜಾ ಮಾಡಿ" ಎಂದು ಮೆಂಬರೊಬ್ಬರು ಭಾಷಣಮಾಡಿದಾಗ, ಒಬ್ಬರು ದಯವಿಟ್ಟು ಉರ್ದುವಿನಲ್ಲಿ ಮಾತನಾಡಿ, ಅಂದರಂತೆ. (ನಗು)

ಕಳ್ಳತನದಲ್ಲಿ ಸಾಮಗ್ರಿ ಸಾಗಿಸುವುದನ್ನು ತಪ್ಪಿಸಲು ತೀವ್ರ ಕಾರ್ಯಕ್ರಮ ಕೈಗೊಳ್ಳಲಾಗುವುದು ಎಂದು ಹೇಳುತ್ತಾ, ಯಾವ ಕ್ರಮ ಕೈಕೊಳ್ಳಲಾಗುತ್ತದೆ ಎಂಬುದನ್ನೂ ಸಪ್ಲೈ ಸಚಿವರು ವಿವರಿಸಿದರು.

—ದಿನಪತ್ರಿಕೆ.

—ಮುಂದಕ್ಕೆ ಹಾಗೆ ಮಾಡುವುದಿಲ್ಲವೆಂದು ಅನೇಕ ಸದಸ್ಯರು ಅಲ್ಲೇ ಪ್ರಮಾಣ ಮಾಡಿದರೆಂಬುದು ನಿಜವಲ್ಲವಂತೆ.

* * *

ಅವಸರದ ಠರಾವು ಬಿದ್ದು ಹೋಯಿತು.

—ದಿನ ಪತ್ರಿಕೆ.

—ಸ್ವಲ್ಪ ನಿಧಾನಿಸಚಾರದಾಗಿತ್ತೆ ?

* * *

ಕನ್ನಡಿಗರಲ್ಲದವರು ಕನ್ನಡದಲ್ಲಿ ಒಂದು ಪರೀಕ್ಷೆಯಲ್ಲಿ ಉತ್ತೀರ್ಣರಾಗ ಬೇಕೆಂಬ ನಿಯಮವಿದೆ. ಪರೀಕ್ಷೆಯಲ್ಲಿ ಉತ್ತೀರ್ಣರಾಗುವವರೆಗೂ ಅವರನ್ನು ಹುದ್ದೆಯಲ್ಲಿ ಖಾಯಂ ಮಾಡುವುದಿಲ್ಲ.

—ಅಧಿಕಾರಿಗಳೊಬ್ಬರು.

—ಈ ಪರೀಕ್ಷೆಯುನ್ನು ತಮ್ಮ ಭಾಷೆಯಲ್ಲೇ ನಡೆಸಬೇಕೆಂದು ಹಲವು ಹುದ್ದೇದಾರರು ಅರ್ಜಿ ಹಾಕಿರುವರಂತೆ.

* * *

ಸಭೆಯಲ್ಲಿ ಕೋರಂ ಇರಲಿಲ್ಲವೆಂದು ಮೆಂಬರೊಬ್ಬರು ಸೂಚಿಸಿದರು. ಅಧ್ಯಕ್ಷರು ಸಭೆಯನ್ನು ಹತ್ತು ನಿಮಿಷ ಕಾಲ ಮುಂದೆ ಹಾಕಿದರು. ಅನಂತರ ಕೋರಂ ಬಂದಿತು.

—ದಿನ ಪತ್ರಿಕೆ.

—"ಕೋರಂರವರು ಬಂದರು" ಎಂದು ಹೇಳಬೇಕಾಗಿತ್ತು. ಅವರನ್ನು ಹೀಗೆ ತುಚ್ಛವಾಗಿ ಕಾಣುವುದು ಸರಿಯಲ್ಲ.

* * *

"ಶ್ರೀ........ರವರು ಮುಂದುವರಿದು ವಿವರಿಸಿದರು; ಶ್ರೀ........ರವರು ಪುನಃ ಮುಂದುವರಿದು........ಟೀಕಿಸಿದರು; ಶ್ರೀ........ರವರು ಮುಂದುವರಿಯುತ್ತಾ ........ಕೇಳಿದರು; ಮುಂದುವರಿಯುತ್ತಾ........ಶ್ರೀ........ರವರು ಆಹಾರ ಸಮಸ್ಯೆಯನ್ನು............" ಇತ್ಯಾದಿ.

—ದಿನ ಪತ್ರಿಕೆ.

ಹೀಗೆ ಮುಂದುವರಿಯುತ್ತಾ ಮುಂದುವರಿಯುತ್ತಾ ಕಡೆಗೆ ಅವರು ವೇದಿಕೆಯಿಂದಲೇ ಮಾತನಾಡಿರಬೇಕು.

---

# ತಮ್ಮನಿಗೆ ಕಾಗದಗಳು

---

ಪ್ರೀತಿಪತ್ರ ಪಾತ್ರನಾದ ತಮ್ಮನಿಗೆ :

ಆಶೀರ್ವಾದಗಳು. ನೀನು ಮೊನ್ನೆ ಬರೆದ ಕಾಗದ ತಲಪಿತು. ನೀನು ಬಹಳ ದುಃಖದಿಂದಲೂ, ಮುಂದೇನು ಮಾಡಬೇಕೆಂಬ ಹೆದರಿಕೆಯಿಂದಲೂ ಆ ಕಾಗದವನ್ನು ಬರೆದಂತೆ ಕಾಣುತ್ತದೆ. ವಯಸ್ಸು ೨೫ ಆಗಿಹೋಯಿತು. ವಿದ್ಯಾವ್ಯಾಸಂಗ ಎಂದೋ ಮುಗಿಯಿತು. ಸರಕಾರದ ಕೆಲಸಕ್ಕೆ ಅರ್ಜಿ ಬರೆದೂ ಬರೆದೂ ಬರವಣಿಗೆ ವೈದ್ಯರ ಬರವಣಿಗೆಯಂತಾಯ್ತು. ಜೀವನೋಪಾಯ ತೋರುವುದಿಲ್ಲ ಹೀಗೆಲ್ಲಾ ವ್ಯಾಕುಲಪೂರಿತ ಕಾಗದವನ್ನೇ ಬರೆದಿದ್ದಿ. ಈಗಿನ ಕಾಲದಲ್ಲಿ ಹೀಗೆಲ್ಲಾ ದುಃಖಪಡುವುದು ಅನುಚಿತ. ನನಗೆ ಪರಿಚಯಸ್ಥರು ಹಲವಾರು ಜನರು ಹೇಗೆ ಮುಂದೆ ಬಂದರೆಂಬುದನ್ನು ನಿನಗೆ ತಿಳಿಸುತ್ತೇನೆ. ಅವರಂತೆಯೇ ನೀನೂ ಒಂದು ಉದ್ಯಮವನ್ನು ಆರಂಭಿಸಿ, ನಿನ್ನ ಜೀವನ ಪಥವನ್ನು ಹೂವುಗಾಣಿಸು. ಈ ದಿನ ನನ್ನ ಚಿರಪರಿಚಿತ ಶ್ರೀ ಚಿತ್ರಾಯುವಿನ ಉದ್ಯಮವನ್ನು ಹೇಳುತ್ತೇನೆ ಕೇಳು.

ತಿರುವಾಂಕೂರಿನಲ್ಲಿ ರಬ್ಬರ್ ಬೆಳೆಯುತ್ತದೆ. ಈ ವಿಷಯ ಇಡೀ ಭಾರತಕ್ಕೆ ಗೊತ್ತು. ಈಗ ಯುದ್ಧಕಾಲ. ಶ್ರೀ ಚಿತ್ರಾಯುವು ಏನು ಮಾಡಿದ ಗೊತ್ತೆ? ತಿರುವಾಂಕೂರಿಗೆ ಹೋಗಿ ಹಲವಾರು ರಬ್ಬರ್ ಸಾಮಾನುಗಳನ್ನು ಕೊಂಡು ತಂದ. ಸ್ವಲ್ಪ ದೂರ ದೇಶವಾದ ಮಹಿಷಾಬಾದಿನಲ್ಲಿ ಒಂದು ಅಂಗಡಿಯನ್ನು ತೆರೆದ. ಅಲ್ಲಿ ಈ ವಸ್ತುಗಳ ಮಾರಾಟವು ನಡೆಯಲಾರಂಭವಾಯಿತು. ಒಬ್ಬರ ಹತ್ತಿರ ತಂದು ಒಬ್ಬರಿಗೆ ಮಾರುವುದರಲ್ಲಿ ಏನು ಲಾಭ ಬರುತ್ತದೆ. ಯೋಚಿಸಿ ಕಡೆಗೆ ಒಂದು ರಬ್ಬರ್ ಕಂಪೆನಿಯನ್ನು ಕಾಗದದ ಮೇಲೆ ಶುರು ಮಾಡಿದ. ತಿರುವಾಂಕೂರಿನ ಹತ್ತಿರ ರಬ್ಬರು ಹೆಚ್ಚಾಗಿ ಬೆಳೆಯುವ ಬೇರ್ಕಲದಲ್ಲಿ ರಬ್ಬರ್ ಕಾರ್ಖಾನೆಯೊಂದನ್ನು ಮನಸ್ಸಿನಲ್ಲಿಯೇ ಸೃಷ್ಟಿಸಿದ. ಎರಡು ಕ್ರಿಶ್ಚಿಯನ್ನರು ಇಬ್ಬರು ಪಾಲಘಾಟ್ ಅಯ್ಯರುಗಳು, ಒಬ್ಬ ಮದರಾಸಿ. ಹೀಗೆ ಐದು ಜನ ಡೈರೆಕ್ಟರುಗಳನ್ನು ತಾನೇ ನಿರ್ಮಿಸಿದ. ಅಂದವಾದ ಕಾಗದದಲ್ಲಿ ಒತ್ತಕ್ಷರದಲ್ಲಿ ಕಂಪೆನಿಯ ಆಗು ಹೋಗುಗಳನ್ನು ಸಣ್ಣ ಕತೆ ಬರೆದಂತೆ ಬರೆದ. ಅದನ್ನು ತನ್ನೂರಿನ ಪುರಜನರಲ್ಲಿ ಹಂಚಿದ.

ಬೇರ್ಕಲದ ಆಜೂಬಾಜೂ ಇರುವ ಹಣವಂತರಿಗೆಲ್ಲಾ ಒಮ್ಮೆಲೇ ಆಶೆ ಉಂಟಾಯಿತು. ಅಲ್ಲಿಂದ ರಬ್ಬರ್ ಸಾಮಾನುಗಳನ್ನು ತಂದು ಇಲ್ಲಿ ಮಾರಿದವನೇ, ದೊಡ್ಡ ದೊಡ್ಡ ಮೋಟಾರಿನಲ್ಲಿ ಕುಳಿತು, ನವಾಬರಂತೆ ಮೆರೆಯುತ್ತಿರುವಾಗ,

ಆ ರಬ್ಬರ್ ಕಂಪೆನಿಯನ್ನೇ ಕೊಂಡು ಕೊಂಡು ನಾವೇ ಆ ವ್ಯಾಪಾರ ಮಾಡಿದರೆ, ಚಿನ್ನದ ಮನೆಯನ್ನು ಸುಲಭವಾಗಿ ಕಟ್ಟಿಸಬಹುದು, ಎಂದು ಅಂದುಕೊಂಡು ಈ ಕಂಪೆನಿಯ ಬಂಡವಾಳವನ್ನೆಲ್ಲಾ ಅವರೇ ಒದಗಿಸಿಕೊಟ್ಟರು.

ಇದಾದ ಮೂರು ತಿಂಗಳಿನಲ್ಲಿ ಶ್ರೀ ಚಿತ್ರಾಯುವು ಬೇರ್ಕಲದಿಂದ ತಿರುವಾಂಕೂರಿಗೆ ಹೋಗಿ ಬರುವುದಾಗಿ ಹೇಳಿ ಹೊರಟ. ಬೇರ್ಕಲದ ಜನರು ಇವನ ಹಿಂದಿರುವಿಕೆಯನ್ನು ಎದುರು ನೋಡಿ ನೋಡಿ, ಕಡೆಗೆ ಅವನಂಗಡಿಯನ್ನು ತಮ್ಮ ಸ್ವಾಧೀನ ಪಡಿಸಿಕೊಂಡರು, ಅಂದ ಮೇಲೆ ಅದರ ಬಾಡಿಗೆಯನ್ನೂ ತೆರಬೇಕಾಯಿತು. ತಿರುವಾಂಕೂರಿನ ಹತ್ತಿರ ಬೇರ್ಕಲಕ್ಕೆ ಒಬ್ಬನನ್ನು ಕಳುಹಿಸಿದರು. ಆತನಿನ್ನೂ ಬೇರ್ಕಲ ಎಲ್ಲಿದೆಯೆಂದು ಹುಡುಕುತ್ತಿದ್ದಾನೆ.

ಶ್ರೀ ಚಿತ್ರಾಯುವು ಉತ್ತರ ಹಿಂದೂಸ್ಥಾನದಲ್ಲಿ ಗುಪ್ತಗಾಮಿಯಾಗಿ, ಸಾಹುಕಾರನಾಗಿ ಸುಖವಾಗಿ ಬಾಳುತ್ತಿದ್ದಾನೆ.

ಮುಂದೆ ನಿನಗೆ ಶ್ರೀ ಛತ್ರಶರ್ಮನ ವಿಷಯ ಬರೆಯುತ್ತೇನೆ, ಕೊರಗದಿರು.

ನಿನ್ನ ಅಣ್ಣ.

———o———




ಕುಡುಕ—"ನಾನು ಯಾರ್‍ರು....ಎಲ್ಲಿಂದ್ಬಂದೆ........ಎಲ್ಲಿಗ್ಹೋಗ್ಬೇಕೊಂತ್ಬಂದೆ.... ಎಲ್ಲಾ ಹೇಳ್ರೀ ೀ ೀ................"

# ನಾ. ನಾ. ನಾಣಿ

ನಮ್ಮೂರು ಕೋಟೆಗಳಿಗೆ ಪ್ರಸಿದ್ಧಿ. ಕಲ್ಲಿನಲ್ಲಿ ಕಟ್ಟಿದ್ದು ಕಲ್ಲಿಕೋಟೆಯಾಯಿತು. ಗಂಧದ ಮರದ್ದು ಗಂಧದ ಕೋಟೆಯಾಯಿತು. ತಾಳಿಯಲ್ಲಿ ಕಟ್ಟಿದ್ದು ತಾಳೀಕೋಟೆಯಾಯಿತು. ಬಾಗಿಲನಲ್ಲೇ ಕಟ್ಟಿದ್ದು ಬಾಗಿಲಕೋಟೆಯಾಯಿತು. ಈ ಬಾಗಲಕೋಟೆಯು ಪೂರ್ವ್ವಕಾಲದಲ್ಲಿ ಹೇಗಿತ್ತೋ ಏನೋ. ಈಗ ಅದರ ಪ್ರಾಮುಖ್ಯತೆ ಶ್ರೀಯುತ ಬದರೀನಾಥ ಪಂಡಿತರಿಂದ. ಇಡೀ ಹಿಂದೂಸ್ಥಾನದಲ್ಲಿ ಬದರೀನಾಥ ಪಂಡಿತರೆಂದರೆ ತಿಳಿಯದ ಸುಸಂಸ್ಕೃತರಿಲ್ಲ. ಸಂಸ್ಕೃತ ಪಾಂಡಿತ್ಯವನ್ನು ಅಷ್ಟು ಚೆನ್ನಾಗಿ ಹೊಂದಿದ್ದರವರು. ಅಮರಕೋಶದ ಶ್ಲೋಕಗಳನ್ನು ಅವರು ಹೇಳಿದರೆ, ಸಾಮಗಾನ ಮಾಡಿದಂತಾಗುತ್ತಿತ್ತು. ಜಯಜಗಜ್ಜನನಿ ಎಂದು ಆರಂಭಿಸಿ ಶ್ಯಾಮಲಾ ದಂಡಕವನ್ನು ಹೇಳಹೊರಟರೆ ಸಾಕ್ಷಾತ್ ಕಾಳಿಯೇ ಎದುರಿಗೆ ಬಂದು ನಿಲ್ಲುವಳೋ ಎನ್ನುವಂತಾಗುತ್ತಿತ್ತು. ಸ್ಫುಟವಾಕ್ಯಗಳ ಸುರಿಮಳೆಗೆ ಪಂಡಿತರೊಬ್ಬರೇ ಎತ್ತಿದ ಕೈ.

ಬದರೀನಾಥ ಪಂಡಿತರಿಗೆ ಹಲ್ಲು ಬೀಳುವ ಹೊತ್ತಿಗೆ ಮೊದಲಮಗನು ಜನ್ಮವೆತ್ತಿದನು. ಅಂದಮೇಲೆ ಪಂಡಿತರ ಪುತ್ರವಾತ್ಸಲ್ಯ ಕೇಳಬೇಕೆ? ಅಥವಾ ಮಾತೃಪ್ರೇಮವನ್ನು ಹೇಳಬೇಕೆ? ಶ್ರೀಮನ್ನಾರಾಯಣನ ಹೆಸರನ್ನೇ ಇಟ್ಟರು. ನಾಣಿ ಎಂದು ಕರೆಯಲಾರಂಭಿಸಿದರು. ಪಂಡಿತರಿಗೆ ಬಲು ಸಂತೋಷ. ನನ್ನ ಹಲ್ಲುಗಳೆಲ್ಲಾ ಬಿದ್ದುಹೋಗಿ ಶ್ಲೋಕಗಳನ್ನು ನಾನು ಹೇಳುವುದು ಅಸಾಧ್ಯವಾಗುವ ಹೊತ್ತಿಗೆ, ನನ್ನ ಮಗನಿಗೆ ಹಲ್ಲು ಹುಟ್ಟಿ ಮಾತು ಬಂದು, ನನ್ನಂತೆಯೇ ಶ್ಲೋಕ ಪಠಿಸುತ್ತಾನೆ. ವಂಶ ಪಾರಂಪರ್ಯವಾಗಿ ಈ ಯಶಸ್ಸು ನಿಲ್ಲುತ್ತದೆ ಎಂದು.

ನಾಣಿಗೆ ಹಲ್ಲು ಹುಟ್ಟಿ ಮಾತನಾಡುವ ವೇಳೆಗೆ ಪಂಡಿತರು ಏಕದಂತರಾಗಿದ್ದರು. ಮಗನು ಮಾತನಾಡಹೊರಟಾಗ ಒಂದು ತೆರನಾದ ಮುದ್ದು ಮಾತುಗಳು ಹೊರಟವು. ಅಮ್ಮಾ ಅಪ್ಪಾ ಎಂಬ ದುಃಖ ಕಾಲದಲ್ಲಿ ಉಪಯೋಗಿಸುವ ಶಬ್ದಗಳನ್ನೆಲ್ಲಾ ಎಲ್ಲರಂತೆಯೇ ಅನ್ನತೊಡಗಿದನು. ವಯಸ್ಸಾಗುತ್ತ ಬಂದ ಹಾಗೆ ರಾಮ ಎಂದು ಗಿಣಿಗೆ ಹೇಳಿಕೊಟ್ಟಹಾಗೆ ಹೇಳಿದರೂ ವಾಮ ಎಂದನ್ನುತ್ತಿದ್ದನೇ ಹೊರತು, ತಲೆ ಚಚ್ಚಿಕೊಂಡರೂ ರಾಮ ಶಬ್ದ ಅವನ ಬಾಯಲ್ಲಿ ಹೊರಡುತ್ತಿರಲಿಲ್ಲ.

ಪಂಡಿತರು ಇದ್ದುದೊಂದು ಹಲ್ಲನ್ನೇ ಕಡಿಯಹತ್ತಿದರು. ಇಷ್ಟು ದಿವಸ ಇಲ್ಲದ ಮಗನನ್ನು ಈಗೇಕೆ ದೇವರು ನನಗೆ ಕೊಟ್ಟ. ಆ ಮಗನಿಗೆ, ಈ ತೆರನಾದ "ರವಯೋರ್ನ ಭೇದ" ವೇಕೆ? ಸ್ಫುಟವಾಕ್ಯ ಪ್ರವೀಣನೆನಿಸಿಕೊಂಡ ನನಗೆ ಹೀಗಾಗಬೇಕೆ, ಎಂದು ಚಿಂತಿಸಹತ್ತಿದರು. ಚಿಂತಿಸಿ ಚಿಂತಿಸಿ ಕಡೆಗೆ ಅನುಸ್ವಾರ ಮಾಯವಾಯಿತು ಪಂಡಿತರು ಚಿತಾಕ್ರಾಂತರಾಗಿ ಧಗ ಧಗ ಎಂದೇ ಬಿಟ್ಟರು.

ನಾಣಿಯು ಬೆಳೆಯ ಹತ್ತಿದ. ಬೇಗ ಬೇಗ ಬೆಳೆದ. ಈ ಅವಸರದ ಬೆಳವಳಿಗೆ ಯಿಂದಲೇ ಎಷ್ಟು ಉದ್ದ ಬೆಳೆದನೋ ಅಷ್ಟೇ ಅಗಲವೂ ಬೆಳೆದ. ತಾಯಿ ಸಾಕು ವಿಕೆಯಿಂದ ಮೊಂಡುಮೊಂಡಾಗಿ ಬೆಳೆದ. ಕಡೆಗೆ ಇಪ್ಪತ್ತುವರ್ಷದ ಹೊತ್ತಿಗೆ ತಪ್ಪು ನೆಪ್ಪಾಗಿ ಲೆಕ್ಕ ಮಾಡುವುದನ್ನು ಕಲಿತ. ಊರಿನಲ್ಲೆಲ್ಲಾ ಇವನನ್ನು ತಿಳಿಯದ ವರಿಲ್ಲ. ಇವನ ರೂಪು, ಇವನ ಮಾತು ಎಲ್ಲರಿಗೂ ಅರಿತ ವಿಷಯವಾಯ್ತು. ಹುಡುಗರು ತಮ್ಮ ತಮ್ಮಲ್ಲೇ ಪಂದ್ಯ ಕಟ್ಟಿ ಒಂದು ಆಟವನ್ನು ಆಡಲಾರಂಭಿ ಸಿದರು. ನಾಣಿಯ ಹಾಗೆ ಮಾತನಾಡಿ ದವನೇ ಗೆದ್ದ. ಮಾತಿನಲ್ಲಿ 'ರ' ಉಪ ಯೋಗಿಸಿದವನು ಸೋತ. ಈ ಆಟವೇ ಕಡೆ ಕಡೆಗೆ ಒಂದು ದೊಡ್ಡ ವಾಮಾ ಯಣವಾಗಿ ಹೋಯ್ತು. ನಾಣಿಯ ಹೆಸರು ವಾ.ವಾ.ನಾಣಿ ಎಂದು ಪ್ರಸಿದ್ಧ ವಾಯಿತು

ವಾ. ವಾ. ನಾಣಿಗೆ ಸುಸಂಸ್ಕೃತ ಬೇಗೆ ಬರಬೇಕು. ಇನ್ನು ಯಾವ ಭಾಷೆಯನ್ನೂ ಕಲಿಯಲಿಕ್ಕೆ ಸಂಕೋಚ ಅಂಥಾ ಪಂಡಿತ ವಂಶೋತ್ಪನ್ನನಾಗಿ ಕನ್ನಡ ಕಲಿಯುವುದೇ? ಅದನ್ನೂ ಕಲಿಯಲಿಲ್ಲ. ಕಡೆಗೆ ಹುಟ್ಟು ವಿದ್ಯೆ ಯೊಂದೇ ಅವನಿಗಾದ ಅಭ್ಯಾಸ.

ನೀವು ಕೇಳಬಹುದು. ಇದೆಲ್ಲಾ ಸರಿಕಣಯ್ಯಾ, ಇದನ್ನೆಲ್ಲಾ ಯಾಕೆ ಹೇಳುತ್ತಿದ್ದಿ ಎಂದು. ಅದನ್ನೇ ಹೇಳ ಹೊರಟಿದ್ದೆ. ಇಂತಹ ನಾಣಿಗೆ ಜೀವ ಮಾನದಲ್ಲಿ ಏನು ಸುಖ ದೊರಕೀತು. ಇವನು ಹೇಗೆ ತಾನೆ ಮುಂದಕ್ಕೆ ಬರು ತ್ತಾನೆ ಎಂದು ನಿಮಗನಿಸುವುದಿಲ್ಲವೇ. ಬಾಗಿಲಕೋಟೆಯಲ್ಲಿ ಎಲ್ಲರೂ ವಾ.ವಾ. ನಾಣಿಯು, ತಿಥಿ ಮನೆಯಲ್ಲಿ ಮೂರ ನೆಯ ಬ್ರಾಹ್ಮಣ ಎಳ್ಳು ದಾನಕ್ಕೆ ಸದಾ ಸಿದ್ಧನಾಗುತ್ತಾನೆ ಎಂದು ತೀರ್ಮಾನಿ ಸಿದ್ದರು.

ಆದರೆ ಅವನೇನಾದ ಗೊತ್ತೇ? ಅವ ನೇ ಹೇಳಿದುದನ್ನು ಹಾಗೆಯೇ ಇಲ್ಲಿ ಹೇಳುತ್ತೇನೆ ಕೇಳಿ.

"ನೋಡು ಈಶ್ವರ್, ಎಲ್ಲವೂ ಹಾಸ್ಯ ಮಾಡಿ ಬಾಗಿಲಕೋಟೆಯಲ್ಲಿ ಗೋಳು ಹುಯ್ದುವೋ ಇಲ್ಲವೊ, ನಾನು ಬೇಜಾ ವಾಗಿ ಬೊಂಬಾಯಿಗೆ ಬಂದೇಬಿಟ್ಟೆ. ಭಾವತದ ನವ ಯುಗ ಬೊಂಬಾಯಿ ನಲ್ಲೇ ಶುವು. ಮೂಲೆ ಮೂಲೇಲೂ ಸಿನಿಮಾ ಕಂಪೆನಿಗಳು. ನನ್ನ ಮಾತು, ನನ್ನ ವೂಪು ನೋಡಿ, ಕಂಪೆನಿ ಮೇಲೆ ಕಂಪೆನಿ ಪೈಪೋಟಿಗೆ ಬಿದ್ದು ನನ್ನನ್ನು ಸಿನಿಮಾ ಕೆಲಸಕ್ಕೆ ಸೇವಿಸಿ ಕೊಂಡವು. ಈಗ ತಕ್ಕಮಟ್ಟಿಗೆ ಸಂಪಾ ದಿಸುತ್ತಿದ್ದೇನೆ."

" ನಾನು ಅವನನ್ನು ಕೇಳಿದೆ. ನಿನ್ನ ಹೆಸರೇ ನೋಡಲಿಲ್ಲವಲ್ಲಯ್ಯಾ ಯಾವ ಚಿತ್ರದಲ್ಲೂ. ಯಾವ ಕಂಪೆನಿಯಲ್ಲಿ ದ್ದೀಯೇ"

"ನಾನು ಯಾವ ಚಿತ್ರದಲ್ಲೂ ನಟಿ ಸಿಲ್ಲ. ನಟನಟಿಯವಿಗೆ ಸುಸ್ತಾದಾಗ ನಾನವವ ಹತ್ತಿವ ಹೋಗಿ ಮಾತನಾಡು ತ್ತೇನೆ. ಅವವಿಗೆಲ್ಲಾ ಆಯಾಸ ಪವಿ ಹಾವ ಆಗುತ್ತೆ. ಅದೇ ನನ್ನ ಕೆಲಸ" ಎಂದಂದ.

—ಬಿ. ವಿ. ಈಶ್ವರ್.

———o———

# ಹೋಗದ ಊರಿಗೆ ದಾರಿ!

---

ಒಂದೂ ಎರಡೂ.........ಹೇಳಪ್ಪಾ ಚಿನ್ನಾ! ನೀನು ಜಾಣನಲ್ಲವೇ?

ನಾನು ಹೇಳಿದರೆ ನೀನೇನು ಕೊಡುತ್ತೀಯಾ? ಅಪ್ಪಾ!

ಅಂಗಡಿಯಿಂದ ಪೆಪ್ಪರ್‌ಮೆಂಟ್ ಕೊಂಡು ತರುತ್ತೇನೆ.

ಊಹೂಂ.........ಚಾಕೇಟು (chocolate) ಕೊಂಡು ತಂದರೇನೇ............

ಆಗಲಿ, ಆಗಲಿ ಹೇಳಮ್ಮಾ ಚಿನ್ನಾ! ಊಂ.........ಬೇಗ ಬೇಗ. ಒಂದೂ......... ಆ ಮೇಲೆ?

ಒಂದೂ, ಎರಡೂ, ಐದೂ, ಒಂಬತ್ತು.........

ಇಲ್ಲ.........ಇಲ್ಲಾ, ತಪ್ಪೂ! ಒಂದೂ.........ಎರಡೂ.........ಆ ಮೇಲೆ? ಐದಲ್ಲ.

ಇಲ್ಲ.........ಆರೂ.........

ಆರೂ ಅಲ್ಲ. ಚೆನ್ನಾಗಿ ಯೋಚಿಸಿ ನೋಡು.

ಅಪ್ಪಾ! ನಿನ್ನೆ ನೀನು ಮಾತ್ರ ಹೊಸ ಬೂಟ್ಸು ಕೊಂಡು ತಂದೆ. ನಂಗೆ ಮಾತ್ರ.........

ಆಗಲಿ, ಹೇಳು ಚಿನ್ನಾ.

ಯಾವಾಗ ತರುತ್ತೀಯಾ?

ಸಂಜೆ.

ಊ ಹೂಂ.........ಈಗಲೇ ಬೇಕು.

ಇನ್ನೂ ಏಳು ಘಂಟೆ ಸಹ ಹೊಡೆಯಲಿಲ್ಲವಲ್ಲಾ. ಅಂಗಡಿ ಬಾಗಿಲು ಸಹ ತೆರೆದಿರಲಾರದು. ಸಂಜೆ ಆಫೀಸಿನಿಂದ ಬರುವಾಗ ಖಂಡಿತ ಕೊಂಡು ತರುತ್ತೇನೆ.

ಅದುವರೆವಿಗೂ ನಿನ್ನ ಬೂಟ್ಸನ್ನು ಹಾಕಿಕೊಳ್ಳುತ್ತೇನೆ ಅಪ್ಪಾ!

ನನ್ನ ಬೂಟ್ಸು ನಿನಗೆ ಬಹಳ ದೊಡ್ಡದಲ್ಲವೇ! ನಿನ್ನದು ಪುಟಾಣಿ ಕಾಲು.

ಪರವಾಗಿಲ್ಲಪ್ಪಾ, ಹಾಕೋತೇನೆ.........ಎಂದು ಮಗುವು ತಲೆಯನ್ನು ಚಾಚಿಕೊಂಡು ಬೇಡಲು, ರಾಯರು ಫಕಫಕನೆ ನಕ್ಕರು. ಅಷ್ಟರೊಳಗೆ ಕಮಲಮ್ಮನು ಬಂದು "ಏನೊಂದ್ರೆ ಮಗನಿಗೆ ಪಾಠ ಹೇಳಿಕೊಡುವ ಸಡಗರದಲ್ಲಿ ಕಾಫಿಯನ್ನೇ ಮರೆತು ಹೋದಿರಲ್ಲಾ! ಕಾಫಿ ತಣ್ಣಗಾಗಿ ಹೋಗಿರಬೇಕಲ್ಲಾ" ಎಂದು ಕೇಳಿದ

ನಂತರವೇ ರಾಯರಿಗೆ ಪಕ್ಕದಲ್ಲಿದ್ದ ಕಾಫಿಯ ಜ್ಞಾಪಕವು ಬಂತು. ಮಗನಿಗೆ ಪಾಠ ಹೇಳಿಕೊಡುವ ಸ್ವಾರಸ್ಯದಲ್ಲಿ ಪ್ರಾಣ ಸ್ನೇಹಿತನಾದ ಕಾಫಿಯನ್ನು ಸಹ ಮರೆತುಹೋದರು.

ಅಮ್ಮಾ ನಂಗೆ ಕಾಫಿ ಕೊಡೇ!

ಅಗೋ! ನಿನ್ನ ಹತ್ತಿರದಲ್ಲೇ ಇಟ್ಟಿರುವೆನಲ್ಲೋ. ನೀನು ಕೂಡ ನೋಡ ಲಿಲ್ಲವೇನೋ?

ಊಂ, ತಣ್ಣಗಾಯ್ತು. ನಂಗೇ ಇದು ಬೇಡಾ. ಊಂ........ಎಂದು ರಾಗ ತೆಗೆದನು ರಾಜಣ್ಣ.

ಇಲ್ಲಿ ಕೊಡೋ, ಮತ್ತೆ ಬಿಸಿ ಮಾಡಿ ತರುತ್ತೇನೆ.

ಕೊಡೋಲ್ಲಾ ಹೋಗು. ಮತ್ತೆ ನಂಗೆ ಬಿಸಿ ಮಾಡದೆ ಬಿಸಿಬಿಸೀ ಕಾಫೀ ಬೇಕೂ.

ಆದರೆ ಬೇರೆ ಕಾಫೀ ತಾರೇ.

ಬೇಡ ಹೋಗು. ನಂಗೆ ಇದೇ ಕಾಫೀ ಬಿಸೀಬೇಕು.

ಇದನ್ನೇ ಕುಡಿ ಮತ್ತೆ. ಬೇಡವಂದವರಾರು? ಎಂದು ರೇಗಿದಳು ತಾಯಿ.

ಬಿಸಿಯಿಲ್ಲವಲ್ಲಾ?

ಅದೇ ಮತ್ತೆ, ಬಿಸಿ ಮಾಡಿ ತರುತ್ತೇನೆ ಎಂದೆನಲ್ಲಾ.

ಊ ಹೂಂ........ಹೀಗೆಯೇ ಬಿಸಿಯಾಗಬೇಕು. ಬಿಸಿ ಮಾಡದ ಬಿಸೀ ಕಾಫಿ ಬೇಕು........

ನನ್ನ ಬಂಗಾರವಲ್ಲವೇ ನೀನು? ಕುಡೀಮ್ಮಾ ಇನ್ನೂ ಬಿಸಿಯಾಗಿಯೇ ಇದೆಯಲ್ಲಾ, ನೀನು ಮುಟ್ಟಿ ನೋಡಲೇ ಇಲ್ಲ! ಎಂದು ಲೋಟಿಯನ್ನು ಮುಟ್ಟಿ ನೋಡಿ, ಮಗುವನ್ನು ಸಂತೈಸ ತೊಡಗಿದಳು ತಾಯಿ.

ಆದರೆ, ಚಕ್ಕುಲಿ ಕೊಟ್ಟರೆ ಕುಡಿಯುತ್ತೇನೆ.

ಮನೆಯಲ್ಲಿ ಚಕ್ಕುಲಿಯಿಲ್ಲವಲ್ಲಾ ರಾಜ! ಮಧ್ಯಾಹ್ನ ಮಾಡಿಕೊಡುತ್ತೇನೆ. ಕುಡೀಮ್ಮಾ.

ಇಲ್ಲದಿದ್ದರೆ ಚಿಂತೆಯಿಲ್ಲ. ಕೊಡೂಮಾ.

ಮಧ್ಯಾಹ್ನ ಮಾಡಿಕೊಡುತ್ತೇನೆ ಕಣೋ. ಈಗ ಕಾಫಿಯನ್ನು ಕುಡಿ. ಆ ಮೇಲೆ ಬಹಳ ತಣ್ಣಗಾಗಿಬಿಡುತ್ತೆ. ಹೀಗೆ ಹಠಹಿಡಿದರೆ ಅಪ್ಪ ಹೊಡೆದು ಬಿಡುವರು ಜೋಕೆ!

ಅಪ್ಪ ಹೊಡೆದರೆ, ನಾನೂ ಅಪ್ಪನನ್ನು ಹೊಡೆಯುತ್ತೇನೆ.

ಅಪ್ಪ, ಅಮ್ಮ ಎಲ್ಲರನ್ನೂ ಹೊಡೆದರೆ ದೇವರು ಕೋಪಿಸಿಕೊಳ್ಳುವರು.

ದೇವರೆಲ್ಲಿದ್ದಾನೇ? ಬರಹೇಳು ಮತ್ತೆ;

ಅವರು ನಮ್ಮ ಕಣ್ಣಿಗೆ ಕಾಣಿಸುಲ್ಲ. ಅವಿತುಕೊಂಡು ನಾವು ಮಾಡುವುದೆಲ್ಲವನ್ನೂ ನೋಡುತ್ತಿರುತ್ತಾರೆ. ಹೀಗೆ ಹಠ ಹಿಡಿದರೆ ಚೆನ್ನಾಗಿ ಹೊಡೆದು ಬಿಡುವರು............

ಅಪ್ಪಾ, ಅಪ್ಪಾ! ಅವತ್ತು ಅಮ್ಮನು ನಿನ್ನ ಹತ್ತಿರ ಸೀರೆ ಕೊಂಡು ತಾ ಎಂದು ಹಠಹಿಡಿದಳಲ್ಲಾ, ದೇವರು ಅಮ್ಮನನ್ನು ಹೊಡೆಯಲೇ ಇಲ್ಲವಲ್ಲಾ!

ಅಮ್ಮನು ದೊಡ್ಡವಳು.

ಆದರೆ, ನಾನೂ ಈಗಲೇ ದೊಡ್ಡವನಾಗಿಬಿಡುತ್ತೇನೆ.

ಹೇಗೋ ಆಗೋದು? ಎಂದರು ತಂದೆ.

ನಿನ್ನಂತೆ ಕನ್ನಡಕ ಹಾಕೊಂಡು, ಪಂಚೆ ಉಟ್ಟುಕೊಂಡು, ಜುಟ್ಟು ಇಟ್ಕೊಂಬಿಟ್ರೆ ಆಯ್ತು!

ಅಷ್ಟು ಮಾತ್ರ ಸಾಲದು! ನಿನಗೆ ಒಂದೂ ಎರಡೂ ಸಹ ಹೇಳಲು ಬರುವುದಿಲ್ಲವಲ್ಲಾ, ನಿನ್ನನ್ನು ಆಫೀಸಿನಲ್ಲಿ ಯಾರು ಸೇರಿಸಿಕೊಳ್ಳುವರು?

ನೀನು ಮುಂಚೆ ನನ್ನನ್ನು ಆಫೀಸಿನಲ್ಲಿ ಸೇರಿಸಿಬಿಡು. ಆ ಮೇಲೆ ಕಲ್ತು ಕೊಂಡ್ಬಿಡುತ್ತೇನೆ. ಅಪ್ಪಾ!

ಹೋಗೊ ಪೋಲಿ! ಮೊದಲು ಕಾಫಿಯನ್ನು ಕುಡಿ ಮತ್ತೆ.

ಊ ಹೂಂ, ನಂಗೆ ಬಿಸಿ ಬಿಸೀ ಕಾಫೀ ಬೇಕು.

ಹೋಗೇ, ಬಿಸಿ ಮಾಡಿಕೊಂಡು ಬಾ.

ಬೇಡಾ, ಬೇಡಾ. ಬಿಸಿ ಮಾಡದ ಬಿಸೀ ಕಾಫಿಯೇ ಬೇಕು ನಂಗೆ.

ಎಲ್ಲವೂ ನೀವು ಕೊಡುವ ಮುದ್ದಿನಿಂದಲೇ ಹೀಗೆ ತಲೇಹರಟೆ ಮಾಡುತ್ತಾನೆ. ನಿಮ್ಮ ಮಗನಿಗೆ ಬಿಸಿ ಮಾಡದ ಬಿಸೀ ಕಾಫಿ, ಸುತ್ತದ ಚಕ್ಕುಲಿ ಎಲ್ಲವೂ ಬೇಕು. ನಿಮ್ಮ ಪಾಡು, ನಿಮ್ಮ ಮಗನ ಪಾಡು, ಎಂದು ರೇಗುತ್ತಾ ಅಡಿಗೆಯ ಮನೆಯೊಳಗೆ ಹೊರಟುಹೋದಳು ತಾಯಿ. ಆಗ ಸುಬ್ಬರಾಯರು ಮನೆಯೊಳಗೆ ಪ್ರವೇಶಿಸಿದರು.

ರಾಯರು "Good morning sir, ಏನು ಇಷ್ಟೊಂದು ಮುಂಜಾನೆಯಲ್ಲಿ ಬಿಜಯ?"

ಮನೆಯಲ್ಲಿ ಹುಡುಗನು ಕಾಫೀ ಕುಡಿಯಲು ರಗಳೆ ಮಾಡುತ್ತಲಿದ್ದ. ಹೋಗದ ಊರಿಗೆ ದಾರಿ ಹಿಡಿಯುತ್ತಲಿದ್ದ. ನನಗೆ ಬಲು ಬೇಜಾರಾಯಿತು ಹೀಗೇ ಬಂದೆ........ಎಂದು ತಲೆಯನ್ನು ಕೆರೆಯುತ್ತಾ ಸುಬ್ಬರಾಯರು ಅಂದರು.

—ಶ್ರೀಮತಿ ಜ. ರಾ. ಶ್ರೀ.

---



ಜನಸೇವಾಪ್ರಸಕ್ತ—ನೋಡ್ರಿ, ಹೀಗೆ, ಇವನ ಹತ್ರಿರೋದೆಲ್ಲಾ ಕೊಂಡು ಕೊಂಡು ಬಿಟ್ರೆ ......ಸ್ನೇಹಿತ್ರು ನಿಂತ್ಕೊಂಡು ಮಾತಾಡ್ತಿದ್ರೆ ಬಂದು ಅರ್ಚುಕೊಳ್ಳೆ ಇರ್ತಾನೆ.

# ಬುಟ್ಟಿ ತಂದ ಬಿ.ಎ.

ಅಥವಾ

# ತುಂಡು ಫೋನಿನ ತಂತ್ರ

---

ಟೆಲಿಫೋನ ಹಿಡಿದೆದ್ದ ಠೀವಿಯಲಿ ತಮ್ಮಯ್ಯ!
ಕಿವಿಹತ್ರ ತುಟಿಹತ್ರ ನಿಂತಿತ್ತು
ಕೃತಕ ಕಿವಿ ಕೃತಕ ಬಾಯ್, ಕರಿಯ ಕಿಂಕರರಂತೆ!
ನಂಬರಲಿ ಬೆರಳಿರಿಸಿ ಬಲಗಡೆಗೆ ಮಿದುವಾಗಿ ಒತ್ತಿದನು,
ಒಂದು ಸಲ ಎರಡು ಸಲ ಮೂರು ಸಲ ನಾಲ್ಕು ಸಲ!
ಕುಯಕುಯೋ ಕುಯಕುಯೋ
ಅಪಶಕುನ ಸದ್ದು ತಾ ಟಿಂಪನವ ಬಡಿದಾಗ,
ವಿಧಿವಿಲಾಸವ ಬೈದು, ಹಾಳೆಂದು ಹೂಂಕರಿಸಿ,
ಕುರ್ಚಿಯಲಿ ಕುಕ್ಕರಿಸಿ, ಕ್ಯಾಕರಿಸಿ ಉಗುಳಿದನು;
ಹುಳಕಡ್ಡಿ ಬಂದಂತೆ ಹುಚ್ಚಾಗಿ ತಲೆಕೆರೆದು!
ತಮ್ಮಯ್ಯನೊಡನೆದ್ದು ಮತ್ತೊಮ್ಮೆ ಫೋನೆತ್ತಿ
ಗಿರಗಿರಿಸಿ 'ಹೆಲೋ' ಎಂದು ಹೂಂಗುಟ್ಟಿ,
'ಇಲ್ಲವೇ? ಟೂರೇನು? ಎಲ್ಲಿಗೇ? ಯಾವೂರಿಗೆ?'
ಎಂಬೆಲ್ಲ ಹೇಳುತ್ತ, ಹಲ್ಕಿರಿದು ನಸುನಕ್ಕು
ಕೂತನಾ ಕುರ್ಚಿಯಲಿ.

........'ನಿಮಗೆ ಲಕ್ಕಿಲ್ಲದಿರೆ ನಾನೇನು ಮಾಡೇನು?
ಆತನೋ ಸಿಕ್ಕಿಲ್ಲ! ಈ ಭೂಪ ಟೂರ್ ಹೊರಟ!
ಬರುವುದೋ ಗುರುವಾರ! ಮನೆಯಲಿದ್ದರೆ ನಾನು
ಮಾತಾಡಿ ನೀವ್ ಹೇಳ್ದ ಚಾಕರಿಯ ಕೊಡಿಸಿರುವೆ.
ದೋಸ್ತಿ, ನನಗವರಲ್ಲಿ ಲಂಗೋಟಿ ಯುಗದಿಂದ!'
ಎಂದನಾ ತಮ್ಮಯ್ಯ,

ಸೀಬೆ ಹೂ ಕದಳಿ ಫಲ ಬಾದಾಮಿ ಖರ್ಜೂರ
ವೀಳ್ಯ ತುಂಬಿದ ಬುಟ್ಟಿ ತಂದಿದ್ದ ತರುಣಂಗೆ!
........'ಇರಲಿ, ಸಾರ್! ನೀವೇನು ಮಾಡೀರಿ!
ನನ್ನದೇ ಹಣೆ ಬರಹ! ನೀವೆನಗೆ ತಾಯ್ತಂದೆ!'
ಎಂದವನು ಕೈ ಹಿಸುಕಿ ಕಂಗಳಲಿ ನೀರ್ತುಂಬೆ,

"ಕಾಳು! ಕಾಳಣ್ಣಯ್ಯ! ಸೆಕ್ರೆಟೇರ್ಯೆಟ್ಟಿನಲಿ
ಮತ್ತೊಬ್ಬ ಮಿತ್ರನನು ಕೇಳುವೆನು ನಿನಗಾಗಿ!
ನಿನ್ನ ಈ ಬುಟ್ಟಿಯಲಿ ತುಂಬಿರುವ ಫಲ ಪುಷ್ಪ,
ಕೆಲಸ ಸಿಕ್ಕಿದ ಮೇಲೆ ನೀ ಕೊಡುವ ಉಡುಗೊರೆಯ,
ನೆನೆದಾನು ದಾಕ್ಷಿಣ್ಯವೆಲ್ಲವನು ಚೆಲ್ಲುವೆನು!"
ಮತ್ತೆ ಫೋನನು ಎತ್ತಿ ಪುಸ್ತಕದಿ ನಂಬರನು
ಹುಡುಕಾಡಿ ಹಿಡಿದೊತ್ತಿ 'ಎಸ್ಸೆಸ್ಸು' ಎಂದೊದರಿ
'ಮೂವತ್ತು ಸಾಲ್ದಯ್ಯ! ಗ್ರೇಡುಂಟೆ ಚಾಕರಿಗೆ'
'ಜನವರಿಗೆ ಸಿದ್ಧವೋ?' 'ಹಾಗಾದರೇನಿನ್ನು ಬರಹೇಳಲೇ
ನಾನು?' 'ನೋ ನೋ ನೊ' 'ಗೊತ್ತಾಯ್ತು' 'ತ್ಯಾಂಕ್ಸಪ್ಪ'
ಎಂದೆನುತ ಕೆಳಗಿಟ್ಟ. "ಜನವರಿಗೆ ಬಾ, ತಮ್ಮ!
ಮೂವತ್ತು ರೂಪಾಯಿ ಸಂಬಳವ ಕೊಡಿಸುವೆನು"
ಎಂದನಾ ತಮ್ಮಯ್ಯ, ಉಪಕಾರಿಯಂದದಲಿ.
ಫೋನಲಾಡಿದ ಮಾತು ಪರಕಿವಿಗೆ ಕೇಳಿಸಲು
ಸಾಧಕದ ತೆರನಾದ ಸಿಲ್ಕ್ಯಾರ್ಡು ಮಾರುದ್ದ
ತುಂಡಾಗಿ ಮುರಿದಿತ್ತು ಕೆಳಬಿತ್ತು ತಮ್ಮಯ್ಯ
ನೆದುರಿನಲ್ಲಿ ಬರಿ ಫೋನು ಕುಂತಿತ್ತು.
ಆ ಮಿತ್ರ ಈ ಮಿತ್ರ ಹೇಳಿದ್ದು ಕೇಳಿದ್ದು ಬರಿ ಬುರುಡೆ!
ಶಾಕಾಯ ಲವಣಾಯ ಉದರ ಪೂರಣ ತಂತ್ರ!
ನವ ತರುಣನಾಗಲೇ ಅವಮಾನದಿಂ ರೇಗಿ
ರೂಲ್ದೊಣ್ಣೆ ಹಿಡಿದೆತ್ತಿ, 'ಶಕ್ಸ! ರೋಗ್' ಎಂದೆನುತ
ತಮ್ಮಯ್ಯ ನೆದುರಿದ್ದ ರಿಸ್ಟ್‌ವಾಚನಪಹರಿಸಿ,
'ಹೋ' ಎಂದನಾ ಮನುಜ! "ತುಂಡು ಫೋನಲಿ ಕೂಗು!
ನನಗೇನು? ಭಯವಿಲ್ಲ! ಪೋಲೀಸ ತರಿಸುನೀ"
ಎಂದೆನುತ ಹೊರನಂಟ ಬುಟ್ಟಿಯೊಡನಾ ಬಿ.ಎ.

——o——

# ಹೃತ್ಪೂರ್ವಕವಾಗಿ

---

ಸಮಿತಿ, ಸಂಘ, ಸಭೆ ಎಂಬಿವೇ ಮೊದಲಾದ ಗೊಂಜೆಯಾಟಗಳಲ್ಲಿ ಉಪನ್ಯಾಸಕರು, ಅಧ್ಯಕ್ಷರು, ಪ್ರಾರ್ಥನೆಕಾರರು, ಸಂಗೀತಕಾರರು ಇತ್ಯಾದಿ ಮಹಾನುಭಾವರನೇಕರು ಬಂದು ಕುಣಿದು ಮಾಯವಾಗುವರು. ಪರದೆ ಹಿಂದೆ ನಿಂತು ದಾರ ಹಿಡಿದೆಳೆದು ಅವರನ್ನು ಆಡಿಸುವ ಸೂತ್ರಧಾರ—ನಮ್ಮ ಕಾರ್ಯದರ್ಶಿ. ಆತನ ಪಾತ್ರ ಬಹಳ ಸಣ್ಣದು; ಒಂದೇ ಒಂದು ಸಲ ಸಭಿಕರ ಕಣ್ಮುಂದೆ ಸುಳಿದು ಕಿರಿದಾದ ಪಾತ್ರವೊಂದನ್ನು ನಟಿಸುತ್ತಾನೆ. ಉಪನ್ಯಾಸಕರು, ಅಧ್ಯಕ್ಷರು ಮೊದಲಾದವರು ಮೊದಲಿನಿಂದಲೂ ರಂಗಸ್ಥಳದಲ್ಲೇ ಮಂಡಿಸಿರುತ್ತಾರೆ. ಆದರೆ ಕಾರ್ಯದರ್ಶಿ ಒಮ್ಮೆ ಮಾತ್ರ ಸಭಿಕರ ಮುಂದೆ ನಿಂತು ತನ್ನ ಕಾರ್ಯವನ್ನು ಮಾಡಿ ಕೃತಕೃತ್ಯನಾಗುತ್ತಾನೆ. ಅದೇ ಹೃತ್ಪೂರ್ವಕವಾಗಿ ಸರ್ವರಿಗೂ ವಂದನಾರ್ಪಣ. ಯಾವ ಕಾರ್ಯಕ್ರಮದ ಪಟ್ಟಿಯನ್ನಾದರೂ ತೆಗೆದು ನೋಡಿ! ಕೊನೆಯಲ್ಲಿ "ವಂದನಾರ್ಪಣ" ಎಂದು ಪ್ರಕಟವಾಗಿರುತ್ತೆ. ಸಭಿಕರಿಗೆ ಸ್ವಾರಸ್ಯದಾಯಕವಾದ ನಾಟ್ಯ, ನಾಟಕ, ಸಿನಿಮಾ ಸಂಗೀತ ಇವು ಯಾವುವೂ ಇಲ್ಲದಿದ್ದರೂ "ವಂದನಾರ್ಪಣ" ಮಾತ್ರ ಇದ್ದೇ ಇರುತ್ತೆ. ಮರುದಿನ ದಿನ ಪತ್ರಿಕೆಗೆ ವರದಿಯನ್ನು ಕಾರ್ಯದರ್ಶಿ ಬರೆದು ಕೊಡುವಾಗಲೂ "ಸಂಘದ ಕಾರ್ಯದರ್ಶಿಗಳಾದ ಶ್ರೀಮಾನ್‌........ರವರಿಂದ ಸ್ಫೂರ್ತಿದಾಯಕವಾದ ವಂದನಾರ್ಪಣವಾದ ಮೇಲೆ ಸಭೆ ಕೊನೆಗಂಡಿತು'' ಎಂದು ಬರೆದೇ ಕೊಡುತ್ತಾನೆ. ಅಂದಿನ ಉಪನ್ಯಾಸದ ವಿಷಯ 'ಸ್ವಾರಸ್ಯವಾಗಿತ್ತು' ಎಂಬ ಒಂದು ಮಾತಿನಲ್ಲೇ ಮುಗಿದರೂ ವಂದನಾರ್ಪಣಕ್ಕೆ ಮಾತ್ರ ಎಂಟು ಹತ್ತು ಮಾತುಗಳು ಬೇಕೇ ಬೇಕು! ಆದರೆ, ಕಾರ್ಯದರ್ಶಿ ಪಡುವ ಕಷ್ಟಗಳನ್ನು ನೋಡಿರುವ ಸಹೃದಯರಿಗೆ "ಪಾಪ! ಅದೂ ಬೇಡವೆ" ಅಂತ ಅನ್ನಿಸುವುದರಲ್ಲಿ ಸಂದೇಹವಿಲ್ಲ.

ಕಾರ್ಯದರ್ಶಿ ವಂದನಾರ್ಪಣ ಮಾಡುವಾಗ "ಈತ ಬಹಳ ಸಂತೋಷದ ಮೇಲಿದಾನೆ" ಅಂತ ಇತರರಿಗೆ ಅನ್ನಿಸುವುದು ಸ್ವಾಭಾವಿಕ. ಏಕೆಂದರೆ, ಆತನೇನೋ ನಸುನಗುತ್ತಲೇ ಆ ಕಾರ್ಯವನ್ನು ಮಾಡುತ್ತಾನೆ. ಆತನ ಮುಗುಳ್ನಗೆ ನಮ್ಮನ್ನು ಮರುಳುಮಾಡುತ್ತದೆ. ಆದರೆ, ತಮ್ಮೆಲ್ಲರ ಪರವಾಗಿ ನನ್ನ ಹೃತ್ಪೂರ್ವಕವಾದ ವಂದನೆಗಳನ್ನು ಸಮರ್ಪಿಸಲು ಸಂತೋಷಿಸುತ್ತೇನೆ'', "ಈ ಸುದಿನವು ನನ್ನ ಜೀವಮಾನದಲ್ಲೇ ಅತಿ ಮುಖ್ಯವಾದದ್ದು ಮತ್ತು ಅತ್ಯಾನಂದಕರವಾದದ್ದು'', "ಇಂತಹ ಉಪನ್ಯಾಸವನ್ನು ಕೇಳಿದನಂತರ ಭಾಷಣಕಾರರನ್ನು ವಂದಿಸಲು ಮಾತೇ ಹೊರಡುವುದಿಲ್ಲ", "ಈ ಕಾರ್ಯವನ್ನು ಮಾಡಲು ನನಗೊಂದು ಹೆಮ್ಮೆ''—ಎಂದು ಮುಂತಾಗಿ ಕಾರ್ಯದರ್ಶಿ ಆಡುವ ಮಾ

ಕುಗಳು ನಿಜವಾಗಿಯೂ ಆತನ ಅಂತ ರಾಳದಿಂದ ಹೊರಹೊಮ್ಮಿದುವುಗಳಲ್ಲ. ಅವು ಬಾಯಿಂದ ಕಿವಿಗೆ ಬರುವ ಸುಳ್ಳೇ ಹೊರತು ಹೃದಯದಿಂದ ಹೃದಯಕ್ಕೆ ಚಿಮ್ಮುವ ಸತ್ಯವಲ್ಲ. ಏಕೆಂದರೆ, ಆ ಮಾತುಗಳನ್ನು ಆಡುವಾಗ ಕೋಪದಿಂದ ಕೆಂಪೇರಿದ ಆತನ ಒಳಗಣ್ಣಿನ ಮುಂದೆ ಚಲನ ಚಿತ್ರದ ಹಾಗೆ ಅನೇಕ ದೃಶ್ಯ ಗಳು ಹರಿದಾಡುತ್ತವೆ. ಅವನು ಸತ್ಯ ವನ್ನೆ ನುಡಿದಿದ್ದಾದರೆ ''ಇಂದಿನ ಉಪ ನ್ಯಾಸಕರಿಂದ ನಮಗೆ ತುಂಬಾ ಆಶಾ ಭಂಗವಾಗಿದೆ. ಅವರು ನಿಜವಾಗಿಯೂ ಸ್ವಾರಸ್ಯವಾದ ಉಪನ್ಯಾಸವನ್ನು ಮಾಡುತ್ತಾರೆಂದು ನಾವು ನಂಬಿದ್ದೆವು. ಅವರನ್ನು ಭಾಷಣಮಾಡಿರೆಂದು ನಾನು ಹೋಗಿ ಕೇಳಿದಾಗ, ಅಯ್ಯೋ, ಅವರು ಆಡಿದ, ಆಡಬಾರದ ಮಾತುಗಳೆಷ್ಟು? ಅವರಿವರನ್ನು ಕೇಳಿ ಎಂದು ಅವರು ನನಗೆ ಹೇಳಿದಾಗಲೂ ಅವರನ್ನೇ ಕಷ್ಟ ಪಟ್ಟು ಒಪ್ಪಿಸಿ ಕರೆತಂದುದು ನನ್ನ ತಪ್ಪು. ಅವರ ಮನೆಗೆ ದಿನ ಬೆಳಗಾ ದರೆ ಅಲೆದಲೆದು ಸುಸ್ತು ಇನ್ನೂ ಉಳಿ ದಿದೆ. ಇಷ್ಟು ಅಸಹ್ಯವಾದ ಒಂದು ಉಪನ್ಯಾಸವನ್ನು ಇದುವರೆಗೂ ಕೇಳಿಲ್ಲ ವೆಂದರೆ ನೀವೆಲ್ಲರೂ ಕರತಾಡನಗಳೊ ಡನೆ ಒಪ್ಪುವಿರೆಂದು ನಂಬುತ್ತೇನೆ. ನಿಮ್ಮೆಲ್ಲರ ಕಿವಿಗೂ ಈತನ ಬಾಯಿಗಾ ರಿಕೆಯಿಂದ ಬಹಳ ಬೇಸರವಾಗಿರಬೇಕು. ಕ್ಷಮಾಪಣೆ ಬೇಡುತ್ತೇನೆ, ಇನ್ನು ಮೇಲೆ ಇಂತಹ ಉಪನ್ಯಾಸಕರನ್ನು ಕರೆತರುವು ದಿಲ್ಲ ಎಂದು ಭರವಸೆ ಕೊಡುತ್ತೇನೆ. ಮಹಾ ಜನಗಳು ಸಂಘದ ಸದಸ್ಯತ್ವ ವನ್ನು ಬಿಡದೆ, ಹಳೇ ಬಾಕಿ ಚಂದಾ ವನ್ನು ಕೊಡಬೇಕೆಂದು ಕೈಮುಗಿದು ಬೇಡುತ್ತೇನೆ........" ಈ ಭಾವಗಳು ಕಾರ್ಯದರ್ಶಿಯ ಮನಸ್ಸಿನಿಂದ ಮೇಲು ಮೇಲಕ್ಕೆ ಬರುತ್ತಿದ್ದರೂ ಅವುಗಳನ್ನು ಅದುಮಿ ಹಿಡಿದು, ನಗುವಹಾಗೆ ಮಾಡು ತ್ತಾ "ಸ್ವಾರಸ್ಯವಾಗಿತ್ತು", "ವಿಚಾರ ಪೂರಿತವಾಗಿತ್ತು'', ''ಭಾವಗರ್ಭಿತವಾ ಗಿತ್ತು'' ಎಂದು ಮುಂತಾಗಿ ಹೊಗಳು ತ್ತಾನೆ. ಇಂತಹ ಸಂಯಮ ಎಲ್ಲರಿಗೂ ಸುಲಭ ಸಾಧ್ಯವಲ್ಲ. ಬೇರೊಬ್ಬರಾಗಿ ದ್ದರೆ ಇದೇ ಸಮಯ ಅಂತ ಉಪನ್ಯಾಸ ಕರ ಮೇಲೆ ಸೇಡು ತೀರಿಸಿಕೊಳ್ಳದೆ ಬಿಡರು. ಆದರೆ, ಕಾರ್ಯದರ್ಶಿಗಳೆಲ್ಲರೂ ಸಾಧು ಪ್ರಾಣಿಗಳು! ಕಾರ್ಯದರ್ಶಿಗಳು —ಕಪಟನಾಟಕ ಸೂತ್ರಧಾರಿಗಳು.

ವಂದನಾರ್ಪಣವಾಗುತ್ತಿರುವಾಗ ಉ ಪನ್ಯಾಸಕರೂ ಆತನ ಮಾತು ಅಕ್ಷರಶಃ ನಿಜವೆಂದು ನಂಬುತ್ತಾರೆ. ಅವರಿಗೂ ಕೂಡ ಕಾರ್ಯದರ್ಶಿಯ ಅಂತರಾಳ ತಿಳಿ ಯದೆ ಇರುವುದು ಆಶ್ಚರ್ಯ. ಕಾರ್ಯ ದರ್ಶಿಯನ್ನು ಅನೇಕಸಾರಿ "ಆಗ ಬಾ, ಈಗ ಬಾ........'' ಎಂದು ಅಲೆಸಿದ್ದೂ ಅವರೇ. ಅನೇಕ ಗಂಟೆಗಳ ಚರ್ಚೆಯಾದ ನಂತರ, ಬೇರೊಬ್ಬರನ್ನು ಎಲ್ಲಿ ಕರೆದು ಬಿಡುವರೋ ಏನೋ ಎಂಬ ಭಯ ಬಂದಾಗ, ಒಪ್ಪಿದ್ದೂ ಅವರೇ, ಅರ್ಧ ಗಂಟೆ ಹೊತ್ತು ಮೀರಿ ಸಭೆಗೆ ಬಂದು ಪ್ರಕಟವಾಗಿದ್ದ ವಿಷಯವನ್ನು ಬಿಟ್ಟು, ಅಡ್ಡಹಾದಿ ಹಿಡಿದು ಏನೇನೋ ಮಾತಾ ಡಿದ್ದೂ ಅವರೇ! ಆದರೂ, ತಮ್ಮ "ಅಮೋಘವಾದ ಭಾಷಣ"ದಿಂದ ಸಂಘ ಕ್ಕಾದ ''ಮಹದುಪಕಾರ''ವನ್ನು ಕಾರ್ಯ ದರ್ಶಿ ನಿಜವಾಗಿಯೂ ಕೃತಜ್ಞತೆಯಿಂದ ಸ್ಮರಿಸುತ್ತಿದ್ದಾನೆ ಎಂದು ಅವರು ತಿಳಿದು ಕೊಳ್ಳುತ್ತಾರೆ. ಪ್ರಾರಂಭದಲ್ಲಿದ್ದ

ತುಂಬು ಸಭೆ ಬರಬರುತ್ತಾ ಕರಗಿ ಕಡಿಮೆಯಾದುದರಿಂದಲೇ ತಮ್ಮ ಭಾಷಣದ "ಸ್ವಾರಸ್ಯತೆ"ಯನ್ನು ಅವರು ತಿಳಿದುಕೊಳ್ಳುವುದಿಲ್ಲ. "ಇಂತಹ ಉಪನ್ಯಾಸವನ್ನು ಇದುವರೆಗೂ ನಾವು ಕೇಳಿಯೇ ಇಲ್ಲ" ಎಂದು ಘಂಟಾಘೋಷವಾಗಿ ಹೇಳುವ ಕಾರ್ಯದರ್ಶಿಯ ಮಾತಿನ ಅರ್ಥವನ್ನು ಗ್ರಹಿಸಲಾರದೆ ಅವರು ಆನಂದದಿಂದ ಸಭೆಗೆಕೈಮುಗಿಯುತ್ತಾರೆ. ಅದಕ್ಕೆ ಮರುತ್ತರವಾಗಿ ಸಭಿಕರು ಕರತಾಡನ ಮಾಡುವಾಗ ಅವರ ಸಂತೋಷಕ್ಕೆ ಎಲ್ಲೆಯಿಲ್ಲ. ಕೆಲವರು ತಮ್ಮ ಆನಂದವನ್ನು ಅರಬಾಗಿದ ತಲೆಯಿಂದ ಅರೆಮುಗುಳಿದ ಕಿರುನಗೆಯಿಂದ, ಬೀರುತ್ತಾರೆ. ಹಲವರು ಕಾರ್ಯದರ್ಶಿಯ ಮಾತುಗಳನ್ನು ಕೇಳಿ "ಅಯ್ಯೋ! ಅಯ್ಯೋ! ದೊಡ್ಡ ಮಾತು ಹೇಳೋದು! ........ತ್ಸ........ತ್ಸ........ತ್ಸ ಅಂಥಾ ಅವೋಘವೇನು?............" ಎಂದು ಗಟ್ಟಿಯಾಗಿ ನಿಜವನ್ನು ಹೇಳಿಬಿಡುತ್ತಾರೆ. ಇಷ್ಟಾದರೂ ಅನೇಕ ಉಪನ್ಯಾಸಕರಿಗೆ ಕಾರ್ಯದರ್ಶಿ ಆಡಿದ ಮಾತುಗಳು ಸಾಲದೆಂಬ ಭಾವನೆ ಇದೆ, ನನ್ನಂತಹ ದೊಡ್ಡ ಮನುಷ್ಯನಿಗೆ ಅಷ್ಟು ಮಾತ್ರ ಹೇಳಿದರೆ ಸಾಕೆ?" ಎಂದು ಅವರು ಮಹಾ ಗಂಭೀರರಾಗಿಯೇ ಕುಳಿತಿರುತ್ತಾರೆ. ಮರುತ್ತರವಾಗಿ ತುಸು ನಗೆಯನ್ನೂ ಕೂಡ ತೋರುವುದಿಲ್ಲ!

ಉಪನ್ಯಾಸಕರನ್ನೂ, ಅಧ್ಯಕ್ಷರನ್ನೂ ವಂದಿಸುವ ಕಾರ್ಯಭಾರ ಮಾತ್ರವಿದ್ದಿದ್ದರೆ ಕಾರ್ಯದರ್ಶಿಯ ಕೆಲಸ ಹಗುರವಾಗಿರುತ್ತಿತ್ತು. ಆದರೆ, 'ಹಾಲು'ಕೊಟ್ಟ ಸ್ಕೂಲು ಹೆಡ್ಮೇಸ್ಟರಿಂದ ಹಿಡಿದು ಮಳೆ ಸುರಿಸಿ ತೊಂದರೆ ಕೊಡದಿದ್ದ ದೇವೇಂದ್ರನವರೆಗೂ—ಸರ್ವರಿಗೂ, "ಹೃತ್ಪೂರ್ವಕವಾಗಿ" ವಂದಿಸುವುದೆಂದರೆ ಬೇಜಾರು! ಸಭೆ ಸೇರಿಸಲು ನೆರವಾದ ಒಬ್ಬರನ್ನೂ ಆತ ಬಿಡುವಹಾಗಿಲ್ಲ. ಯಾರೊಬ್ಬರನ್ನು ಮರೆತರೂ ಅವರಿಗೆ ಆಜೀವ ಅಸಮಾಧಾನ. ಆದುದರಿಂದ ಹೆಸರುಗಳ ಪಟ್ಟಿಯೊಂದನ್ನು ತಂದು ಎಲ್ಲರಿಗೂ ವಂದನೆಯನ್ನು ಅರ್ಪಿಸಬೇಕಾಗುತ್ತದೆ. ಒಮ್ಮೆ ಒಂದು ಸಂಘದ ಕಾರ್ಯದರ್ಶಿ ಪೆಟ್ರೊಮಾಕ್ಸ್ ದೀಪವನ್ನು ಪಂಪು ಮಾಡಿಕೊಟ್ಟ ಒಬ್ಬರನ್ನು ವಂದಿಸಲು ಮರೆತನಂತೆ. ಸರಿ! ಆವತ್ತಿನಿಂದ ಬಾಡಿಗೆಗೆ ತಂದ ಪೆಟ್ರೊಮಾಕ್ಸ್ ದೀಪಗಳೆಲ್ಲವೂ ಅರ್ಧ ಸಭೆಯಾಗುತ್ತಿರುವಾಗಲೇ ಆರಿಹೋಗುವುವು! ಹೀಗೆ ನೂರಾರು ಜನರನ್ನು ವಂದಿಸುವ ಸಂದರ್ಭಗಳಲ್ಲಿ ಸಭಿಕರು ವಂದನಾರ್ಪಣೆ ಮುಗಿಯುವುದರೊಳಗೆ ಸ್ವಗೃಹಗಳನ್ನು ಸೇರಿರುತ್ತಾರೆ; ಸಂಗೀತಕಾರರು "ಪವಮಾನ ........" ಎಂದು ಆರಂಭಿಸಿದ ಕೂಡಲೇ ಎದ್ದು ಹೊರಡುವ ಸಭಿಕರಂತೆ, ಕಾರ್ಯದರ್ಶಿ ವೇದಿಕೆಯ ಮೇಲೆ ನಿಂತು "ವಂದನಾರ್ಪಣೆ" ಮಾಡಲು ಉದ್ಯುಕ್ತನಾಗಿರುವಾಗಲೇ ಸಭೆಯಲ್ಲಿ ಉಳಿದಿದ್ದ ಅಲ್ಪಸ್ವಲ್ಪ ಜನ ಹೊರಕ್ಕೆ ಹೊರಟುಬಿಟ್ಟಿರುತ್ತಾರೆ! ಪಾಪ ಕಾರ್ಯದರ್ಶಿಯ ಮನಸ್ಸಿಗೆ ಹೇಗಾಗಬೇಕು?

ಇನ್ನೊಂದು ಮುಖ್ಯವಾದ ವಿಷಯ. ಸಂಘಗಳ ಹುಟ್ಟು ಸಾವುಗಳೂ "ವಂದನಾರ್ಪಣೆ"ದ ಮೇಲೆಯೇ ನಿಂತಿದೆ! ಸಾಮಾನ್ಯವಾಗಿ ಕಾರ್ಯದರ್ಶಿ ತನ್ನ ಒಡನಾಡಿಗಳನ್ನು ಮರೆತುಬಿಡುತ್ತಾನೆ ಅಂದರೆ ವಂದಿಸಲು ಮರೆತುಬಿಡುತ್ತಾನೆ. ಇದರ ಪರಿಣಾಮವಾಗಿ ಜಗಳಗಳು

ಮೊಳೆತು, ಅವರಲ್ಲಿ ಅಸಮಾಧಾನ ವುಂಟಾಗಿ "ಬಿಡೋ ಬಿಡೋ! ಕಂಡಿದೀನಿ! ತಲೆಯಿಲ್ಲಾ ಪ್ರತಿಷ್ಠೆ ಇವನಿಗೆ ಬನ್ರೋ" ಎಂದು ಕೆಲವರು ಬೇರೆಯಾಗುತ್ತಾರೆ. "ತನ್ನ ಹೆಸರೇ ಎಲ್ಲೆಲ್ಲೂ ಬರಬೇಕೂಂತ ಹೀಗೆಲ್ಲಾ ಮಾಡ್ತಾನೋ......." ಅನ್ನುವವರು ಹಲವರು. "ಬನ್ರೋ ನಾವೇ ಇನ್ನೊಂದು ಸಂಘ ಸ್ಥಾಪಿಸೋಣ" ಎನ್ನುವವರು ಎಲ್ಲೋ ಒಬ್ಬಿಬ್ಬರು. "ಲೋ! ಸಂಘದ ಹಣ ಎಲ್ಲಾ........" ಎನ್ನುವವರು ಎಲ್ಲರೂ. 'ಗೌರವ' ಕಾರ್ಯದರ್ಶಿಯಾಗಿ ದುಡಿದುದರ ಫಲ "ಹಣ ತಿಂದ ಹೆಗ್ಗಣ" ಎಂಬ ಅಗೌರವ ಸಂಪಾದನೆ! ಅಷ್ಟೆ!

—ಎಂ. ವಿ. ನಾ.

---

# ಬೇಲಿ ಹೊಲ ಮೇದಾಗ?

---

ಮೊನ್ನೆ ಪೋಲೀಸ್ ದಫೇದಾರರೊಬ್ಬರು ಬಹಳ ವಿಚಿತ್ರ ರೀತಿಯಲ್ಲಿ ವರ್ತಿಸಿದರು. ಯಾವುದೋ ಒಂದು ಅಯ್ಯಂಗಾರ್ ಬಂಗಲಿಗೆ ಕನ್ನ ಕೊರೆದು ಒಳನುಗ್ಗಿ ಎಂಟು ಬೆಳ್ಳಿ ಚೊಂಬುಗಳನ್ನು ಶೇಖರಿಸಿ ಮೂಟೆ ಕಟ್ಟಿಕೊಂಡು ಹಿಂದಿನ ಬಾಗಿಲು ಚಿಲಕ ತೆಗೆದು ಹೊರಬಂದರು. ಮಳೆ ಬಿದ್ದು ಕೆಸರಾಗಿ ಹಿತ್ತಲ ನೆಲದಲ್ಲೆಲ್ಲ ತಮ್ಮ ಹೆಜ್ಜೆ ಗುರುತುಗಳೇ ಇದ್ದುದನ್ನು ಕಂಡು ಅವರಿಗೆ ಕೊಂಚ ಗಾಬರಿಯಾಯಿತು. ತಕ್ಷಣವೇ ಅಲ್ಲಿದ್ದ ಒಂದು ಪೊರಕೆಯನ್ನು ಹಿಡಿದು ಹೆಜ್ಜೆ ಗುರುತುಗಳನ್ನೆಲ್ಲ ಗುಡಿಸಿ ಅಳಿಸುತ್ತಿದ್ದಾಗ, ದಫೇದಾರರಿಗೆ ಜ್ಞಾನೋದಯವಾಯಿತು. ಎಲಾ! ನಾನೇ ಪೋಲೀಸಾಗಿರುವಾಗ ಕನ್ನವೆಂದರೇನು? ಕದ್ದ ಮಾಲೆಂದರೇನು? ಎಂದು ಯೋಚಿಸಿ ತಮ್ಮನ್ನು ತಾವೇ ಅರೆಸ್ಟು ಮಾಡಿಕೊಂಡು ಚೊಂಬುಗಳ ಸಹಿತ ಪೋಲೀಸ್ ಸ್ಟೇಷನ್ನಿಗೆ ನಡೆದರು.

ಅರ್ಧ ದಾರಿಯಲ್ಲಿ ಮತ್ತೆ ಮಂಕು ಕವಿಯಿತು. ಹೇಗಾದರೂ ಮಾಡಿ ಪೋಲೀಸರ ಕೈಯಿಂದ ತಪ್ಪಿಸಿಕೊಳ್ಳಬೇಕೆಂಬ ಕಳ್ಳ ಬುದ್ಧಿ ತಲೆದೋರಿತು. ತೋರಿದ್ದೇ ತಡ, ಪುಸಕ್ಕನೆ ಅವರು ಅಡ್ಡ ದಾರಿ ಹಿಡಿದು ಗಲ್ಲೀಗೆ ಬಿದ್ದು ಹೆಂಡದಂಗಡಿಯೊಂದರೊಳಗೆ ಹಾರಿ ಮಾಯವಾದರು. ಒಂದೊಂದಾಗಿ ಚೊಂಬುಗಳನ್ನು ಅಡವಿಟ್ಟು, ದಫೇದಾರರು ಅಲ್ಲಿ ಸಿಕ್ಕಿದ ಪಾನೀಯವನ್ನು ಮತ್ತೆ ಮತ್ತೆ ಮೊಗೆದರು. ಮತ್ತು ತಲೆಗೇರಿತು. ಆ ಉತ್ಸಾಹದಲ್ಲಿ ಅವರು ಅನೇಕ ದಾಸರ ಪದಗಳನ್ನು ಹಾಡಿದರು. "ಕಂಡು ಕಂಡು ನೀಯೆನ್ನ ಕೈಯ ಬಿಡುವರೆ?" ಎಂದು ಹಾಡುತ್ತಿದ್ದಾಗ ಅವರಿಗೆ ತಮ್ಮ ಪೂರ್ವ ಚರಿತ್ರೆ ಎಲ್ಲವೂ ಸ್ಮೃತಿಪಥಕ್ಕೆ

ಬಂತು. ತಾವು ತಮ್ಮನ್ನು ತಮ್ಮ ಪೋಲೀಸ್ ಸ್ಟೇಷನ್ನಿಗೆ ಎಳೆದುಕೊಂಡು ಹೋಗುತ್ತಿದ್ದಾಗ ತಾವು ತಮ್ಮ ಕೈಯ್ಯನ್ನು ಕೊಡವಿ ತಪ್ಪಿಸಿಕೊಂಡದ್ದು ಜ್ಞಾಪಕಕ್ಕೆ ಬಂತು. ಸೆಕ್ಷನ್ ಪ್ರಕಾರ ತಾವು ಮಾಡಿದ್ದು ಮಹಾಪರಾಧ ಎಂದು ಯೋಚಿಸಿ ಅವರು ತಮಗೆ ತಾವೇ ಆ ಅಪರಾಧಕ್ಕೆ ಶಿಕ್ಷೆಯನ್ನು ಕೊಡಲು ಪ್ರಾರಂಭಿಸಿದರು. ಸ್ಟೇಷನ್ನಲ್ಲಿ ಸಾಮಾನ್ಯ ಅಪರಾಧಿಗೆ ಕೊಡುವಂತೆ ತಮಗೆ ತಾವೇ ಪ್ರಹಾರ ಮಾಡಿಕೊಂಡರು. ಅವರ ಕಪಾಳಗಳೆರಡೂ ಊದಿ ಅವರ ಗುರುತೇ ಇತರರಿಗೆ ಸಿಗದಂತಾಯಿತು. "ತಪ್ಪಿಸಿಕೊಂಡು ಹೋಗುತ್ತೀಯಾ? ಕೇಡಿ!" ಎಂದು ತಮ್ಮ ಬೆನ್ನ ಮೇಲೆ ತಾವೇ ಗುದ್ದಿದರು. ಕೂದಲನ್ನು ಹಿಡಿದೆಳೆದರು. ಮೂಗಿಗೆ ನೇರವಾಗಿ ಮುಷ್ಟಿಯಿಂದ ನಾಲ್ಕೈದು ಬಿಗಿದರು. ಅಷ್ಟರೊಳಗೆ ಅವರಿಗೆ ಅವರ ಮೇಲೆ ರೇಗಿತು. "ಹೊಡೀತೀಯಾ, ಹಾಳಾದವನೇ?" ಎಂದು ಅವರು ಅವರ ಮೇಲೆಯೇ ತಿರುಗಿಬಿದ್ದರು. ಹೆಂಡದಂಗಡಿಯ ಮಾಲೀಕರೂ ಅದರ ಮಹಾ ಪೋಷಕರೂ ಈ ಅಚ್ಚರಿಯನ್ನು ನೋಡಿ, "ಹೊಡಿಯೋ! ಬಿಡಬೇಡ, ಇನ್ನೂ ಒಂದು, ಹಾಗೆ" ಎಂದು ಅವರನ್ನೂ ಅವರ ಕೈಯಿಂದ ತಪ್ಪಿಸಿಕೊಂಡು ಬಂದಿದ್ದ ಅವರನ್ನೂ ಹುರಿದುಂಬಿಸಿದರು. ಕಡೆಗೆ ತಪ್ಪಿಸಿಕೊಂಡವರೇ ಗೆದ್ದರು! ಪೋಲೀಸ್ ಸ್ಟೇಷನ್ನಿಗೆ ಹಿಡಿದುಕೊಂಡು ಹೋಗುತ್ತಿದ್ದವರು ಸೋತರು.

ಹೆಂಡದಂಗಡಿಯಿಂದ ಅವರು ಕಂಬಿ ಕಿತ್ತರು. ದಾರಿ ಉದ್ದಕ್ಕೂ ಓಡಿದರು. ಸ್ಟೇಷನ್ ದಾರಿಯಲ್ಲಿ ಅವರು ನುಗ್ಗಲೇ ಇಲ್ಲ. ನೆಟ್ಟಗೆ ಕೆರೆ ಏರಿ ಕಡೆ ಒಂದೇ ಸಮನಾಗಿ ಓಡಿದರು.

ಕೆರೆ ದಾರಿಯ ಮೇಲೆ ದಫೇದಾರರ ಹಿರಿಯ ಮಗಳು ಬರುತ್ತಿದ್ದಳು. "ಇದ್ಯಾಕೆ ಹಿಂಗೆ ಓಡೀರಿ" ಎಂದಳಾಕೆ. "ಬೆಳ್ಳಿ ಚೊಂಬು ಕದ್ದೆ ಅಂತ ಆ ಹಾಳು ದಫೇದಾರ ನನ್ನನ್ನ ಲಾಕಪ್ಪಿಗೆಳೆದ. ತಪ್ಪಿಸಿಕೊಂಡು ಓಡುತ್ತಿದೀನಿ" ಅಂದರು ಅವರು ಓಟವನ್ನು ನಿಲ್ಲಿಸದೆ.........................

—ನಾ. ಕ.

—೦—









## ಪಠಾಣ ಗರ್ಜನೆ

(ಮೋಹನ ರಾಗದಲ್ಲಿ ಏಕತಾಳದೊಂದಿಗೆ "ಬಿಡೆ ನಿನ್ನ ಪಾದವ" ಎಂಬಂತೆ)

---

ಕೊಡೊ ನನ್ನ ಸಾಲವ, ಕಾಯಿಪೆ ಏಕೊ ।
ಬಿಡೊ ಬರಿ ಮೋಸವ, ಕಪಟವಿದೇಕೊ ॥ ಪ ॥

ಗಲ್ಲಿ ಪ್ರೂಕ್ಕರು ಬಿಡೆ, ಮನೆಯೊಳಗೆ ಬಹು ।
ನಂಟರಿರುವರೆಂದು ಓಡಲು ಬಿಡೆನೋ ॥ ೧ ॥

ಮೋರೆಯ ಕಿರಿಯುತಾ ಕೆರೆದುಕೊಂಡರು ಬಿಡೆ ।
ಚೋರ ರೂಪವ ತಾಳಿ ಪೇರಿ ಕಿತ್ತರೂ ಬಿಡೆ ॥ ೨ ॥

ತಿರುಕನೆಂದರು ಬಿಡೆ, ನೇಣ ಬಿಗಿದು ಕೊರಳ ।
ತರಿದುಕೊಂಡರು ನಾನು ನಿನ್ನನು ಬಿಡೆನೋ ॥ ೩ ॥

ಪೊರೆಯಲಾಗದೆ ಸತಿಯ ಕಾಡನೇರಲು ಬಿಡೆ ।
ಕೆಂಪಾಂಬುಧಿಯಲ್ಲಿ ಧುಮುಕಿದರೂ ಬಿಡೆ ॥ ೪ ॥

ಕಡು ಪಾಪರಾಗಿ ಕೈಯೊಳ್ ಕಾಸಿಲ್ಲೆಂದರು ಬಿಡೆ ।
ಒಡನೆ ರೈಲನು ಹತ್ತಿ ಓಡಲು ಬಿಡೆನು ॥ ೫ ॥

---o---

## ನವೀನ ಗಾದೆಗಳು

(ಪ್ರ. ಪ್ರ. ಸಭೆಯದು)

---

ತೆನೆಗೂಡಿದರೆ ಛತ್ರ—ದಿನ ಕೂಡಿದರೆ ಛತ್ರ್ಯ.

* *

ರೀತಿ ಹೇಳುಕ್ಕೆ ಆತನ್ನ ಕರೆಸಿದರೆ—ಆತ ಅಧಿಕಾರಕ್ಕೆ ಬಂದು ಆರೇ ದಿನವಂತೆ.

* *

ಸಭೆಗೆ ಕೂಡ ಶಾಲೆ ಗಾಳಿ—ಶನಿವಾರ ಒಪ್ಪತ್ತು ಪಾಳಿ.

* *

ನಿಲುವಳಿ ಸೂಚನೆಗಳು ಬಿದ್ದು ಬಿದ್ದು ಹೋದರೆ—ಇದ್ದವರೆಲ್ಲಾ ಬಿದ್ದು ಬಿದ್ದು ನಕ್ಕರೇ?

* *

ರಾಜ್ಯಾದಾಯ ಹೆಚ್ಚಿದ ಈ ವರ್ಷ—ನಿಜವಾಗಲೂ ರಾಗಿ ಬೀಸೋದು ತಪ್ಪಿಹೋಯ್ತು.

* *

ಹಲಕೆಲವು ಸಭಿಕರಿಗೆ—ಮೈಯೆಲ್ಲಾ ಚಿನ್ನ ಕಿವಿ ಮಾತ್ರ ಹಿತ್ತಾಳೆ.

* *

---

# ಕಳ್ಳ

(ಒಂದು ಚಿಕ್ಕ ಕತೆ)

---

ಆ ದಿನ ರಾತ್ರಿ ಸುಮಾರು ಎರಡು ಗಂಟೆ ಸಮಯದಲ್ಲಿ ನಮ್ಮ ಮನೆಯಲ್ಲಿ ವಿಪರೀತ ಕೋಲಾಹಲ. ಐದು ವರ್ಷದ ನನ್ನ ತಮ್ಮನಿಂದ ಹಿಡಿದು ಐವತ್ತು ವರ್ಷದ ನಮ್ಮ ತಾಯಿಯವರೆಗೆ ಎಲ್ಲರೂ ಕೂಗಾಡುತ್ತಿದ್ದರು. ಮನೆಯಲ್ಲೆಲ್ಲಾ ಎಲೆಕ್ಟ್ರಿಕ್ ದೀಪ ಉರಿಯುತ್ತಿತ್ತು. ನನ್ನ ತಂಗಿಯರು ನಡುಗುತ್ತಾ ಅಮ್ಮನ ಹಾಸಿಗೆಯ ಬಳಿ ಕುಳಿತಿದ್ದರು. ನಮ್ಮ ತಾಯಿ "ವೆಂಕಮ್ಮಾ, ರಂಗಮ್ಮಾ" ಎಂದು ಕೂಗುತ್ತಿದ್ದರು. ನಮ್ಮ ತಂದೆ ಸರ್ವೇಸೌದೆ ತರುವುದಕ್ಕೆ ಹಿತ್ತಿಲ ಕಡೆ ಹೋಗಿದ್ದರು. ನಮ್ಮ ದೊಡ್ಡಣ್ಣ ಕಚ್ಚೆ ಕಟ್ಟಿ ಕಟ್ಟಿಗೆ ಹಿಡಿದು ಸಂಗ್ರಾಮಕ್ಕೆ ಸಿದ್ಧವಾಗಿದ್ದ. ನಮ್ಮ ಇನ್ನೊಬ್ಬ ಅಣ್ಣ (ಪೈಲ್ವಾನ್) ತನ್ನ ಕೈಯನ್ನು ಮಡಸಿ ಪಕ್ಕದ ಮನೆಯ ತನ್ನ ಸ್ನೇಹಿತರಿಗೆ ಮಸಲ್ಲನ್ನು ತೋರಿಸುತ್ತಾ "ಇದಿರುವವರೆಗೂ ಏನೂ ಭಯವಿಲ್ರೀ" ಎನ್ನುತ್ತಿದ್ದ. ನಮ್ಮ ಮತ್ತೊಬ್ಬ ಅಣ್ಣ (ಸಾಮ್ಯವಾದಿ) "ಪಾಪ ಹೊಟ್ಟೆಗೆ ಇಲ್ಲ ಆದ್ದರಿಂದ ಕಳ್ಳತನ ಮಾಡ್ತಾರೆ. ಅದಕ್ಕೋಸ್ಕರ ಗಲಾಟೆ ಏಕೆ" ಎಂದು ತನಗೆ ತಾನೇ ಹೇಳಿಕೊಳ್ಳುತ್ತಾ ಹಾಸಿಗೆ ಮೇಲೆ ಮಲಗಿದ್ದ.

ಇಷ್ಟು ಹೊತ್ತಿಗೆ ನಮ್ಮ ಮನೆಯ ಮುಂದೆ ಬಹಳ ಜನ ಸೇರಿಬಿಟ್ಟಿದ್ದರು. ಬುಡನ್ ಸಾಬಿ ಬೀಡಿ ಸೇದುತ್ತಾ "ಮಾರೋ ಪೋ ಸೂವರ್‌ಕೋ" ಎಂದು ಕೂಗಾಡುತ್ತಿದ್ದ. ಸೀಬಯ್ಯನವರು ಸಿಗರೇಟಿನ ಹೊಗೆಯನ್ನು ಬಿಡುತ್ತಾ "ಈ ರ್‍ಯಾಸ್ಕಲ್ಲುಗಳನ್ನು ಸುಮ್ಮನೇ ಬಿಡಬಾರದ್ರೀ" ಎಂದು ಪಕ್ಕದವನಿಗೆ ಹೇಳುತ್ತಿದ್ದರು. ಎಷ್ಟೋ ಜನ ಹೆಂಗಸರು ತಮ್ಮ ಮನೆಯ ಕಿಟಕಿಯ ಮುಂದೆ ನಿಂತುಕೊಂಡು ನಮ್ಮ ಮನೆ ಕಡೆ ಇಣಕಿ ನೋಡುತ್ತಿದ್ದರು. "ಹಾಕ್ರೋ ಮು ........ಮಗನಿಗೆ, ಮುರೀರೋ ಕಾಲು" ಎಂದು ತಿಪ್ಪಾ ಶಾಸ್ತ್ರಿ ಪಿಳ್ಳೆಜುಟ್ಟು ಕಟ್ಟುತ್ತಾ ದೊಣ್ಣೆ ಹಿಡಿದುಕೊಂಡು ಬರುತ್ತಿದ್ದರು. ಇವರೆಲ್ಲಾ ಸೇರುವ ಹೊತ್ತಿಗೆ ಸುಮಾರು ಮೂರು ಗಂಟೆಯಾಗಿತ್ತು. ಇಷ್ಟು ಜನ ಇದ್ದರೂ ಒಬ್ಬರಿಗೂ ಕಳ್ಳನ ಬಳಿ ಹೋಗಲು ಧೈರ್ಯವಿಲ್ಲ. ಎಲ್ಲರೂ ಸುಮ್ಮನೆ ಕೂಗಾಡುತ್ತಿದ್ದಾರೆ. ನಮ್ಮ ತಾಯಿ ಪಕ್ಕದ ಮನೆ ವೆಂಕಮ್ಮನೊಂದಿಗೆ, "ನೋಡೀಮ್ಮಾ ನಿನ್ನೆ ಬೆಳಿಗ್ಗೆ ರಾಮದೇವರ ಪೂಜೆಮಾಡಿ ಬೆಳ್ಳಿ ತಟ್ಟೆ, ಬೆಳ್ಳಿ ಥಾಲಿ, ಉದ್ಧರಣೆ, ಅಲ್ಲದೆ ಬಾಲಕೃಷ್ಣ, ಪಟ್ಟಾಭಿ ರಾಮ ಇವುಗಳೂ ಬೆಳ್ಳಿದೇನಮ್ಮಾ, ದೇವರ ಮಂದಾಸನದ ಹತ್ತಿರ ಇಟ್ಟಿದ್ದೆ ಇಷ್ಟು ಹೊತ್ತಿಗೆ, ಅವನ ಮನೆ ಹಾಳಾಗ, ಆ ಕಳ್ಳ ದೋಚಿಕೊಂಡು ಹೋಗಿ ರುತ್ತಾನಮ್ಮಾ" ಎಂದು ಹೇಳುತ್ತಿದ್ದರು. ಅದಕ್ಕೆ ವೆಂಕಮ್ಮನವರು "ಸುಮ್ಮನಿ ರೀಮ್ಮಾ, ಆ ಭಕ್ತವತ್ಸಲ ರಾಮನೇ ಕಾಪಾಡ್ತಾನೆ. ದುಷ್ಟರಿಗೆ ಎಂದಿದ್ದರೂ ಉಳಿ ಗಾಲವಿಲ್ಲ. ಕೌರವರ ಕತೆ ಕೇಳಲಿಲ್ಲವೇ" ಎಂದು ಸಮಾಧಾನ ಮಾಡುತ್ತಿದ್ದರು.

ಸ್ವಲ್ಪ ಹೊತ್ತಿನಲ್ಲೀ ಗಲಾಟೆ ಸ್ವಲ್ಪ ಕಡಿಮೆಯಾಯಿತು. ಪೋಲೀಸಿನವರು ಬಂದದ್ದೇ ಅದಕ್ಕೆ ಕಾರಣ. ಎಲ್ಲರಿಗೂ ಧೈರ್ಯ ಬಂದಿತು. ಗಂಡಸರೆಲ್ಲರೂ ಮೀಸೆ ತಿರಿವಿಕೊಳ್ಳುತ್ತಾ, ಪೋಲೀಸಿನವರ ಹಿಂದೆ ನಡೆದರು. ಪೋಲೀಸಿನವರು ಕಳ್ಳನಿರುವ ಕಡೆ ಹೋಗುವುದಕ್ಕೆ ಮೊದಲು ನಮ್ಮ ತಂದೆಯವರನ್ನು "ಅಲ್ಲಿ ಏನೇನ್ ಸಾಮಾನು ಇತ್ರೀ" ಎಂದು ಕೇಳಿದರು. ನಮ್ಮ ತಂದೆ ಉತ್ತರ ಕೊಡುವಷ್ಟರಲ್ಲೀ, ನಮ್ಮ ತಾಯಿ "ಸುಮ್ಮನಿರಿ ನಿಮಗೆ ಗೊತ್ತಿಲ್ಲ" ಎಂದು ತಾವೇ ಹೇಳಲು ಪ್ರಾರಂಭಿಸಿದರು. ಕಾನ್ಸ್ಟೇಬಲ್ ಕೆಂಚಪ್ಪ ಬರೆದುಕೊಳ್ಳುವುದಕ್ಕೆ ಶುರು ಮಾಡಿದ. ಬೆಳ್ಳಿ ತಟ್ಟೆ, ಥಾಲೀ, ಉದ್ಧರಣೆಯಿಂದ ಹಿಡಿದು ಕಂಚಿನ ಲೋಟಾವರೆಗೂ ನಮ್ಮ ತಾಯಿ ಪಟ್ಟಿ ಹೇಳಿದರು. ಬೆಳ್ಳಿ ಬಾಲಕೃಷ್ಣ, ಪಟ್ಟಾಭಿರಾಮ ಇವುಗಳನ್ನು ನಮ್ಮ ತಾಯಿ ಹೇಳುವುದಕ್ಕೆ ಮರೆಯಲಿಲ್ಲ. ನಮ್ಮಗಳಿಗೆಲ್ಲಾ ಆಶ್ಚರ್ಯ ನಮ್ಮ ತಾಯಿಯವರ ಬುದ್ಧಿವಂತಿಕೆ ನೋಡಿ. ಏಕೆಂದರೆ, ನಮ್ಮ ಮನೆಯಲ್ಲಿ ಇಲ್ಲದೇಯಿರೋ ಸಾಮಾನುಗಳನ್ನೆಲ್ಲಾ ನಮ್ಮ ತಾಯಿ ಹೇಳುತ್ತಿದ್ದರು.

ಪಟ್ಟಿ ಬರೆದು ಮುಗಿಸಿದ ಮೇಲೆ ದಫೇದಾರ್ "ರೈಟ್-ಎ-ಬೌಟ್ರ್, ಕಿಕ್ ಮಾರ್ಚ್" ಎಂದ. ಪೋಲೀಸ್ ಕಾನ್ಸ್ಟೇಬಲ್ಲುಗಳು ಹೆಜ್ಜೆ ಹಾಕಿಕೊಂಡು, ಬೆನ್ನುಗಳ ಮೇಲೆ ದೊಣ್ಣೆಗಳನ್ನು ಸೇರಿಸಿ ಹೊರಟರು. ಧೈರ್ಯಶಾಲಿಗಳಾದ ಕೆಲವು ಗಂಡಸರು ಅವರ ಹಿಂದೆ ಹೊರಟರು.

ಪೋಲೀಸಿನವರು ಕಳ್ಳನಿರುವ ಕಡೆ ಹೋಗಿ ತೆಗಿಯೋ ಬಾಗಿಲು "ಬೋ.... ........ಮಗನೇ" ಎಂದು ಕೂಗಿದರು. ನಮಗೆಲ್ಲಾ ಕುತೂಹಲ. "ಕಳ್ಳ ಸಿಕ್ಕುತ್ತಾನೆ. ಅವನನ್ನು ಪೋಲೀಸಿನವರು ಹಿಡಿದು ಬೇಡಿ ಹಾಕಿ ಜೈಲಿಗೆ ಕರೆದುಕೊಂಡು ಹೋಗುತ್ತಾರೆ. ಅಲ್ಲಿ ಅವನಿಗೆ ಅನ್ನ ನೀರು ಕೊಡದೆ ಬಲಿ ಹಾಕುತ್ತಾರೆ. ಹಾಗೇ ಆಗಬೇಕು ಅವನಿಗೆ. ಏಕೆ ಕಳ್ಳತನ ಮಾಡಬೇಕು" ಎಂದುಕೊಳ್ಳುತ್ತಿದ್ದೆವು. ನನ್ನ ಚಿಕ್ಕ ತಮ್ಮ ಶಿವು ತನ್ನ ನಿದ್ದೆ ಕಣ್ಣು ಉಜ್ಜಿಕೊಳ್ಳುತ್ತಾ ನನ್ನ ತಂಗಿಯೊಂದಿಗೆ "ಕಳ್ಳ ಹೇಗಿರುತ್ತಾನೆ" ಎಂದು ಕೇಳುತ್ತಿದ್ದ.

ಪೋಲೀಸಿನವರು ಕೂಗಿದರೂ ಕಳ್ಳ ಬಾಗಿಲು ತೆಗೆಯಲಿಲ್ಲ. "ಬಾಗಿಲು ತೆಗೆಯದೇ ಹೋದರೆ ಕಡಿದ್ಹಾಕ್ಬಿಡ್ತೀವಿ ನೋಡ್ಕೋ" ಎಂದು ಕಾನ್ಸ್ಟೇಬಲ್ ಕೆಂಚಪ್ಪ ಕೂಗಿದ. ಆದರೂ ಕಳ್ಳ ಬಾಗಿಲು ತೆಗೆಯಲೇ ಇಲ್ಲ, ಒಳಗೆ ಇನ್ನೂ ಜೋರಾಗಿ ಪಾತ್ರೆ ಶಬ್ದ ಮಾಡತೊಡಗಿದ. ಕಳ್ಳನ ಧೈರ್ಯ ನೋಡಿ ನಮಗೆಲ್ಲಾ ಆಶ್ಚರ್ಯವಾಯಿತು. ಪೋಲೀಸಿನವರಿಗೆ ವಿಪರೀತ ಕೋಪ ಬಂದಿತು. ರೌದ್ರಾಕಾರ ತಾಳಿ, ಮೀಸೆ ಹುರಿಮಾಡಿಕೊಳ್ಳುತ್ತಾ, ದಫೇದಾರ್ ಧರ್ಮಪ್ಪ ಬಾಗಿಲನ್ನು ಒಂದು ಒತ್ತ ಒದ್ದ ನೋಡಿ, ಅಗಣಿ ಕಿತ್ತುಕೊಂಡು ಬಾಗಿಲು ದಢಾರನೆ ತೆಗೆ

ಯಿತು. ಒಳಗಿಂದ "ನಿಮಗೇನೋ ಬಂದಿದೆ ಕೇಡುಗಾಲಾ, ಮುಂ.......ಮಕ್ಕಳಿರಾ" ಎಂದು ನಮ್ಮ ಅಜ್ಜಿ ಬಂದರು. ದಫೇದಾರ್ ಧರ್ಮಪ್ಪ ಸುಸ್ತಾಗಿ ಹುಕ್ಕರಿಸಿಬಿಟ್ಟ

ದೇವರ ಮನೆಯಲ್ಲಿ ಬಾಗಿಲು ಹಾಕಿಕೊಂಡು ನಮ್ಮ ಅಜ್ಜಿ ಗೊರಕೆ ಹೊಡೆಯುತ್ತಾ ಮಲಗಿದ್ದರು. ಕಳ್ಳನ ಕೋಲಾಹಲದಲ್ಲಿ ದೇವರ ಮನೆಯಲ್ಲಿದ್ದ ನಮ್ಮ ಅಜ್ಜಿಯನ್ನು ನಾವೆಲ್ಲಾ ಮರತೇಬಿಟ್ಟಿದ್ದೆವು. ಅಟ್ಟದ ಮೇಲಿದ್ದ ಹಾಲಿನ ಪಾತ್ರೆಯನ್ನು ಉರುಳಿಸಿ, ಪಾತ್ರೆಯಲ್ಲಿದ್ದ ಹಾಲನ್ನೆಲ್ಲಾ ಕುಡಿದು, ನೆಲದ ಮೇಲೆ ಚೆಲ್ಲಿದ್ದ ಹಾಲನ್ನೂ ತನ್ನ ಪಾಡಿಗೆ ತಾನು ನೆಕ್ಕುತ್ತಾ ಕುಳಿತಿತ್ತು ಬೆಕ್ಕು.

—ಎ. ಕೆ.

---

## ಅಜ್ಜೀ ?

(ಶ್ರೀ 'ರತ್ನ'ರ ಕ್ಷಮೆ ಬೇಡಿ)

---

ಒಂದೇ ಮನೇಲ್ ಉಟ್ ಬೆಳೆದೋರು
ಒಂದೇ ಮೂಲೇಲ್ ಒತ್ ಕಳೆದೋರು
ಮೊಮ್ಮಕ್ಳ್ ಆಡಿ ಮಾಡಿದ್ದೆಲ್ಲಾ ನಿಂಗ್ ನೆಪ್ಪೈತ ಅಜ್ಜಿ ?
ಕನ್ನಡ ಕತೆಗೊಳ್ ಏಳು ಅಂತ
ನಾನು ಗುಂಡ ಗೋಳಿಗ್ಕೋಂತ
ಕತ್ಲೆ ಗೋಣೇಲ್ ಕಾಲಗೊಳ್ ಕಟ್ಟಿದ್ ನಿಂಗ್ ನೆಪ್ಪೈತ ಅಜ್ಜಿ ? ॥ ೧ ॥

ಹಾಲು ಸಕ್ರೆ ಕೊಡದೆ ನೀನು
ಅಡಿಗೆ ಮನೆ ಬಿಡದೆ ನಾನು
'ಓಗೂ' ಅಂತ ಒಡದೆ ನೀನು ನಿಂಗ್ ನೆಪ್ಪೈತ ಅಜ್ಜಿ !
ಅಬ್ಬರ್ ಮುಂಚೆ ಪೇಟೆಗ್ ಓಗಿ
ಅಂಗಿ ತಂದು ನಂಗೆ ಕೂಗಿ
'ನನ್ ಚಿನ್ನಾ'ಂತ ನೀ ತೊಡಸಿದ್ದು ನಿಂಗ್ ನೆಪ್ಪೈತ ಅಜ್ಜಿ ! ॥ ೨ ॥

ಅಪ್ಪ ನನ್ನ ಎತ್ಕೊಂಡಾಗ
ಒಬ್ಬರಿಗೊಬ್ಬರು ಮುತ್ಕೊಟ್ಟಾಗ
ಮಿಾಸೆ ಮುಳ್ಳು ಊತ್ಕೊಂಡಿದ್ದು ನಿಂಗ್‌ನೆಪ್ಪೈತ ಅಜ್ಜಿ ?
ಮೇಜಿನ್ ಮೇಲಿನ್ ಕಾಜಗ ಹರ್ದಿ
ಸೀನಿ, ಗುಂಡನ್ ಜೊತೇಗ್ ಕರ್ದಿ
ಕೊಚ್ಚೆ ನೀರಾಗ್ ದೋಣಿನ್ ದಬ್ಬಿದ್ ನಿಂಗ್‌ನೆಪ್ಪೈತ ಅಜ್ಜಿ ? ॥ ೩ ॥

ಒಸದಾಗ್ ಸಾಲೇಗ್ ಓದಾಗ್ ನಾನು
ಶಾವಿಗೆ ಪಾಯಸ ಮಾಡ್ದೆ ನೀನು
ನೆನದರ್ ನಾಲ್ಗೇಲ್ ನೀರೂರ್ತದೆ ನಿಂಗ್‌ನೆಪ್ಪೈತ ಅಜ್ಜಿ ?
ಮೇಸ್ತ್ರು ಸಾಲೇಲ್ ಒಡೆದ್ರೂಂತ
ಮುನುಸ್ಕೊಂಡ್ ಮನೆಯಾಗೆ ಮಲ್ಕೊಂಬುಟ್ಟು
ಆವೊತ್ ಸಾಲೇಗ್ ಓಗ್ನೇನಿಲ್ಲಾ ನಿಂಗ್‌ನೆಪ್ಪೈತ ಅಜ್ಜಿ ? ॥ ೪ ॥

ಸೀಗೆ ಅಳ್ಳಕ್ ಓದಾಂತ್ ಏಳಿ
ಅಮ್ಮನ್ ಚಾಡಿ ಅಪ್ಪಾ ಕೇಳಿ
ಉಗಣಿ ಅಂಬ್ಳಲ್ ಬಡ್ದಿದ್ ನಂಗೆ ನಿಂಗ್‌ನೆಪ್ಪೈತ ಅಜ್ಜಿ ?
ದನೀನ್ ಕೊಟ್‌ಗೆ ಸೇರುಬುಟ್ ನಾನು
'ಒಡಿಯೋ ಒಸ್ಟು ಒಡೀ ನೀನು
ಉಟ್ಟಿರೋದ್ ಏಟ್ ತಿನ್ನಾಕಲ್ಲಾ' ಅಂದಿದ್ ನಿಂಗ್‌ನೆಪ್ಪೈತ ಅಜ್ಜಿ ? ॥ ೫ ॥

ಬಾಳಿನ್ ನೀತಿ ಏಳ್‌ಕೊಟ್ಟೋಳು
ಎಡವ್ರೋ ಕಂದನ್ ಕೈ ಇಡಿದೋಳ್
ಅಳೋ ಮಕ್ಕಳ್ನ ಬಿಳೀಲ್ ಬಿಟ್ಟು ಕಣ್ಮುಚ್ಚಿಬಿಟ್ಯಾ ಅಜ್ಜಿ ?
ಬಟ್ಟೆ ಒಟ್ಟೇಗ್ ಇಲ್ದಿದ್ರೂನೆ
ನಂ ನಂ ಪ್ರೀತಿ ಇರೊವರ್ಗೂನೆ
ದೇಹ ಓದ್ರು ಮಸೋಗಾಲ್ಲ—ನಿಂಗ್‌ನೆಪ್ಪಿರಲಿ ಅಜ್ಜಿ ! ॥ ೬ ॥

—ಎ. ಎಸ್. ಆರ್.

—o—

# ಜೇಬಿನಲ್ಲಿ ಕೈ

ನವೀನ ಕಾಲದ ಪದ್ಧತಿ ಎಂದರೆ ತಮ್ಮ ಪೈಜಾಮದ ಜೇಬಿನಲ್ಲಿ ಕೈಹಾಕಿ ಕೊಂಡು ತಿರುಗಾಡುವುದು. ಇಂದಿನ ನಾಗರಿಕತೆಯ ಕುರುಹಾಗಿದೆ ಅದು. ಹಳೆಯ ಕಾಲದ ಪದ್ಧತಿ ಬಿಡಿ! ತಮ್ಮ ಕೋಟಿನ ಜೇಬಿನಲ್ಲಿ ಕೈಹಾಕಿಕೊಂಡು ನಡೆದಾಡುವುದು. ಬೇಕಾದರೆ ಪರೀಕ್ಷಿಸಿ ನೋಡಿ. ಮುದಿ ತಂದೆ, ಕಿರುಮಗ ಒಟ್ಟಾಗಿ ಹೋಗುತ್ತಿರಲಿ, ಇಬ್ಬರ ಕೈಗಳನ್ನೂ ನೋಡಿ. ನಿಮಗೆ ಬೇಗನೆ ತಿಳಿದು ಹೋಗುವುದು. ನಾನಂತೂ ಈ ಎರಡು ರೀತಿಗೂ ಅತ್ತಿತ್ತ. ಪೈಜಾಮದ ಜೇಬಿನಲ್ಲಿ ಕೈಹಾಕುವ ಹವ್ಯಾಸ ನನಗಿಲ್ಲ; ಕೋಟಿನ ಜೇಬಿನಲ್ಲಿ ಕೈಹಾಕಲಿಕ್ಕೆ ನಾನು ಕೋಟು ಹಾಕುವ ಅಭ್ಯಾಸವೇ ಇಟ್ಟಿಲ್ಲ. ನಿಜವಾಗಿಯೂ ಹೇಳಬೇಕೆಂದರೆ, ನನ್ನ ಜೇಬಿನಲ್ಲೇ ಕೈ ಹಾಕಿಕೊಳ್ಳುವುದು ನನಗೆ ಇಷ್ಟವೇ ಇಲ್ಲ. ತನ್ನ ಜೇಬಿನಲ್ಲಿ ಕೈಹಾಕಿಕೊಂಡರೆ ದೊರೆಯುವುದು ತಾನೆ ಏನು? ಸುಖವೇ, ಸಂತೋಷವೇ, ಏನಾದರೂ ಸಾಮಾನೇ? ಇತರರ ಜೇಬಿನಲ್ಲಿ ಕೈಹಾಕಿದರೆ ತಾನೆ ಅದೃಷ್ಟ, ಆನಂದ.

ಎಂದರೆ, ನಾನು ಜೇಬಿನ ಕಳ್ಳ ಎಂದು ಮಾತ್ರ ಒಡನೆ ನಿರ್ಧರಿಸಬೇಡಿ. ನನಗೂ ಆ ಕುಶಲ ವಿದ್ಯೆಗೂ, ಕೋರ್ಟಿಗೂ ಆ ಕಳ್ಳತನಕ್ಕೂ ಇರುವಷ್ಟು ದೂರ. ಯುದ್ಧದ ದೆಸೆಯಿಂದ ಆ ದುರಾದೃಷ್ಟ ನನ್ನ ಪಾಲಾಗಲಿಲ್ಲ. ಯುದ್ಧವಿಲ್ಲದಿದ್ದರೆ ಅದಕ್ಕೂ ಶರಣು ಹೋಗಬೇಕಾಗುತ್ತಿತ್ತೇನೋ! ಈಗೇನೂ ಪರವಾಯಿಲ್ಲ! ೩ ತಿಂಗಳು ಏರ್‌ಕ್ರಾಫ್ಟ್. ಅಲ್ಲಿಂದ ಓಡಿಸಿದ ಮೇಲೆ ಮಿಲಿಟರಿಯಲ್ಲಿ ಕೆಲಸ ಗಾರನೋ, ಗುಮಾಸ್ತೆಯೋ ಆಗಿ ಇರಬಲ್ಲೆ.

ನಾನೇನೂ ಸೋಮಾರಿಯಲ್ಲ! ನನ್ನನ್ನೇ ಮರೆತು ಹೋಗುವ ಸ್ವಭಾವವೂ ನನ್ನದಲ್ಲ! ಬೇಕಾದರೆ ನನ್ನ ಕೊಠಡಿಯಲ್ಲಿರೋ ಪ್ರತಿ ಸಾಮಾನೂ ಚಾಚೂ ತಪ್ಪದೆ ಒಪ್ಪಿಸಬಲ್ಲೆ. ಎಲ್ಲಿ ಏನೇ ಇರಲಿ, ಸರಿಯೆ! ನನ್ನ ಜೇಬಿನಲ್ಲಿರದಿದ್ದ ರಾಯಿತು. ಒಮ್ಮೆ ಜೇಬಿಗೆ ಹೋಯಿತೆಂದರೆ ಅವು ಹೊರಗೆ ಬರಲು ತಿಂಗಳೇ ಬೇಕಾದೀತು. ಸದಾ ನನ್ನ ಬಳಿಯಲ್ಲೇ ಇದ್ದರೂ, ನನ್ನ ಜೇಬಿನಲ್ಲಿರುವ ಸಾಮಾ ನನ್ನು ಮಾತ್ರ ನಾನೆನಪಿಡಲಾರೆ. ಚಿರಂಡಿಗೆ ಚೆಲ್ಲಿದ ಕಸದಂತೆ ನನ್ನ ಜೇಬಿ ನಲ್ಲಿನ ಸಾಮಾನು. ಸಮುದ್ರದಲ್ಲಿ ಬಿಸುಟ ಸಾಮಾನಿನಂತೆ. ಸಮುದ್ರ ಒಣಗ ಬೇಕು, ನಾ ಜೇಬು ಶೋಧಿಸಬೇಕು!

ಮೊನ್ನೆ ಈ ಆಸ್ತಿ ಶೋಧಿಸಲು ಹೊರಟಿದ್ದು ಹೀಗೆ. ಹಣ ಕಟ್ಟಲಿಕ್ಕೆಂದು ಆಫೀಸಿಗೆ ಹೋಗಿದ್ದೆ. ಇನ್ನೂ ಗುಮಾಸ್ತೆ ಬಂದಿರಲಿಲ್ಲ. ಕಾಯಬೇಕಾಗಿ ಬಂತು. ಏನು ಮಾಡಲೂ ತೋಚಲಿಲ್ಲ. ಆ ಆಫೀಸಿನಲ್ಲೋ ಒಂದು ನೋಟೀಸು

ಬೋರ್ಡೂ ಇಲ್ಲ. ಇದ್ದಿದ್ದರೆ ಹಾಯಾಗಿ ಅದರಲ್ಲಿನ ನೋಟೀಸುಗಳನ್ನು ಓದಿ ಮುಗಿಸುತ್ತಿದ್ದೆ. ಇಲ್ಲವೇ ಟಪಾಲಿನ ಆಫೀಸಿನಲ್ಲಿದ್ದಂತೆ 'ಎ.ಆರ್ ಎಫ್.ಗೆ ಸೇರಿ' 'ಸರ್ಟಿಫಿಕೇಟ್ ಕೊಳ್ಳಿ'ಯ ಜಾಹಿರಾತುಗಳಿದ್ದಿದ್ದರೆ ಅವನ್ನಾದರೂ ಓದಿ ಭಾರತದ ಯುದ್ಧೋದ್ಯಮ ನೋಡಿ ಸಂತೋಷಪಡುತ್ತಿದ್ದೆ.

ಬೇರೆ ಎಲ್ಲಾದರೂ ಹೋಗಿ ಬರೋಣವೆಂದರೆ ಬಂದ ಕೆಲಸ ಮುಗಿಯಲಿಲ್ಲ ವೆಂಬ ಭ್ರಾಂತಿ. ಮುಗಿಲ ಮೋಡಗಳನ್ನಾದರೂ ಎಣಿಸುವ ಎಂದರೆ ಉರಿಬಿಸಿಲು. ತಲೆ ಎತ್ತಿ ನೋಡುವುದಂತಿರಲಿ; ತಲೆ ತಗ್ಗಿಸಿ ನಡೆಯಲೂ ಕೂಡ ಅಸಾಧ್ಯ. ಹೀಗಾಗಿ ಬಲು ಬೇಸರ ಹತ್ತಿತ್ತು. ಮುಂದೆ ಇಂತಹ ಸನ್ನಿವೇಶಗಳಲ್ಲಿ ಬೇಸ್ತು ಬೀಳದಿರಲು ಒಂದು ಪುಸ್ತಕವನ್ನಾದರೂ ತರಬೇಕೆಂದು ತೀರ್ಮಾನಿಸಿದೆ. ಆದರೇನು! ಅಂದಿನ ಪ್ರಶ್ನೆ ಬಗೆ ಹರಿಯಲಿಲ್ಲ.

ನನ್ನ ಜೊತೆಯಲ್ಲೇ ಬರುತ್ತಿತ್ತು ಹಿರಿಯದೊಂದು ಉಗ್ರಾಣ. ಸ್ವಭಾವ ದಂತೆ ನನಗದು ಮರೆತೇ ಹೋಗಿತ್ತು. ನನ್ನ ಆರ್ತನಾದವನ್ನು ಕೇಳಿ ಮನಸಿಗೆ ನುಗ್ಗಿತು, ನೆನಪಿಗೆ ಬಂತು ನನ್ನ ಜೇಬಿಗಿಂತ ಬೇರೆಯ ಆಸ್ತಿಬೇಕೇ? ಸರಿ, ಶೋಧಿಸತೊಡಗಿದೆ.

ಮೊದಲು ಕೈಗೆ ದೊರೆತದ್ದು ಬಸ್ಸಿನ ಟಿಕೆಟ್ಟು. ಒಂದೇ ಎರಡೇ, ನೂರಾರು ಅಕ್ಷಯ ಪಾತ್ರೆಯಂತೆ. ತೆಗೆದಷ್ಟೂ ರಾಶಿಯಾಗ ಹತ್ತಿತು. ದೊಡ್ಡ ಕುಪ್ಪೆ ಯಾಯಿತು. ಅಷ್ಟು ಕಾಗದವೂ ಬರಿದಾಗಿದ್ದರೆ ಕಿಟ್ಟುವಿಗೆ ಬರೆಯಲಿಕ್ಕೆ ಪುಸ್ತಕ ವಾದರೂ ಆಗುತ್ತಿತ್ತೇನೋ! ಆ ಟಿಕೇಟುಗಳ ಹಿಂದೆ ಸಿನಿಮಾ ಜಾಹಿರಾತುಗಳು. ಒಂದರಲ್ಲಿ 'ಪೋತನ'ನಂತೆ! ಪೋತನನೋ ಪೂತನಿಯೋ? ನಾನು ಅದನ್ನು ನೋಡಿಯೇ ಇಲ್ಲ, ಮತ್ತೊಂದು ಹತ್ತು ಘಂಟೆಯಂತೆ! ಈಗಾಗಲೇ ಹನ್ನೆರಡು ಘಂಟೆ. ಹತ್ತೋ, ಹನ್ನೆರಡೋ! ನಾ ಬೇರೆ ಅದನ್ನು ನೋಡುವುದಿಲ್ಲ. ಮತ್ತೊಂದು 'ಶಾರದ'ಳಂತೆ. ಹೆಸರು ಚೆನ್ನಾಗಿದೆ. ದೇವರ ನಾಮ ಬೇರೆ! ಈ ಸಿನಿಮಾಗಳ ವಿಷಯವನ್ನಾದರೂ ಯೋಚಿಸೋಣವೆಂದರೆ ಇವಾವನ್ನೂ ನೋಡ ಕೂಡದೆಂಬ ನನ್ನ ಹಳೆಯ ಪ್ರತಿಜ್ಞೆ ಇದೆ.

ಹೇಳಿಯೇ ಬಿಡ್ತೀನಿ! ಆ ಹಾಳು ಪ್ರತಿಜ್ಞೇನೂ ಹೇಳಿಯೇ ಬಿಡ್ತೇನೆ. ಒಮ್ಮೆ ಸಿನಿಮಾಗೆ ಹೋಗಿದ್ದಾಗ ಅಲ್ಲಿಯ ಗೇಟಿನ ಬಳಿ ನನ್ನ ಟಿಕೇಟನ್ನು ಒಬ್ಬಾತ ಕಸಿದುಕೊಂಡ. ಅಷ್ಟೇ ಸಾಲದೆಂದೋ ಏನೋ, ಆ ಟಿಕೇಟನ್ನು ನಿರ್ದಾಕ್ಷಣ್ಯ ವಾಗಿ ಹರಿದೇಬಿಡುವುದೇ! ಅದರ ಮೇಲೆ ಶ್ರೀಮನ್ಮಹಾರಾಜರ ಗೊಂಬೆಯಿದೆ. ಅದನ್ನು ಅರ್ಧವಾಗಿ ತುಂಡುಮಾಡುವುದೇ! ಇದಕ್ಕಿಂತ ಹೆಚ್ಚಿನ ರಾಜದ್ರೋಹ ಬೇಕೇ! ನನಗೆ ಬಲು ಭಯವೆನಿಸಿತು. ಅಸಹ್ಯವೆನಿಸಿತು. ರಾಜದ್ರೋಹಕ್ಕೆ ಇದಕ್ಕಿಂತ ಹೆಚ್ಚಿನ ನಿದರ್ಶನ ಬೇಕೇ? ನಾನು ರಾಜಭಕ್ತ. ಅರಸರ ಆರೈಕೆಯಲ್ಲಿ

ಬೆಳೆದವ. ನನಗೂ ಹೀಗೇನೇ. ಈ ಅವಮಾನ ನಾನೇ ಸಹಿಸಲಾರೆ! ಹಾಗೆಂದೇ ಸಿನಿಮಾ ಕಂಪೆನಿಯವರು ಈ ಪದ್ಧತಿ ತೊಡೆದು ಹಾಕುವವರೆಗೂ ಸಿನಿಮಾ ನೋಡೆನೆಂದು ವ್ರತ ತೊಟ್ಟೆ.

ಈ ಬಸ್ಸು ಟಿಕೇಟುಗಳ ಜೊತೆಯಲ್ಲಿ ಬ್ಲೇಡೊಂದು. ಅದೂ ಏಕಾಂತ ವಾಸವನ್ನನುಭವಿಸಲಾರದೆ ತುಕ್ಕು ಹಿಡಿದಿದೆ. ಸನ್ಯಾಸವನ್ನು ಕೈಕೊಂಡಿದೆ. ಇತರರನ್ನೂ ಘಾಸಿ ಮಾಡದು. ಅದಾಗಿಯೇ ಅಲ್ಲ! ನಾವು ಪ್ರಯತ್ನ ಪಟ್ಟರೂ ಅಷ್ಟೆ. ಶುದ್ಧ ಅಹಿಂಸಾ ಪ್ರತಿಪಾದಿಯಾಗಿದೆ. ಬ್ಲೇಡನ್ನು ನೋಡಿದೊಡನೆ ನನಗೆ ಬಲು ಸಂತೋಷವಾಯಿತು. ಪ್ರಕೃತಿಯ ಮೇಲೆ ಮಾನವನು ಪಡೆದಿರುವ ಶಕ್ತಿಗೆ ಒಡೆತನಕ್ಕೆ ಆನಂದ ಪಟ್ಟು, ಭಲೆ ಮಾನವ! ನಿನ್ನ ಮುಂದೆ ಯಾವ ಶಕ್ತಿ. ಕುಡುಗೋಲು ಕತ್ತಿಗಳ ಕಾಲನೆನಪಿಗೆ ಬಂತು. ಸಾವಿಗೆ ಇಷ್ಟು ಭಾರಿ ಆಯುಧಗಳು ಬೇಕೆಂಬ ನಮ್ಮ ಮುತ್ತಾತಂದಿರ ಮೂರ್ಖತೆಗೆ ಅಳು ಬಂತು. ಹಾಗೆಂದವರು ನಮ್ಮ ಹಿರಿಯರೇ ಎಂದು ನಾಚಿಕೆಪಟ್ಟೆ. ಬ್ಲೇಡಿನಂತಹ ಪುಟ್ಟ ಆಯುಧವಿರುವಾಗ ನಿಮ್ಮನ್ನು ಹಿಡಿಯುವವರಾರು? ನಿಮಿಷದಲ್ಲಿ ಸಾವು, ನೋವುಗಳ ಅವತಾರ!

ಮುಂದೆ ದೊರೆತದ್ದು ಮುರಿದ ಬೀಡಿಯ ತುಂಡೊಂದು. ಮಳೆಯಲ್ಲಿ ನೆನೆದಿದೆ; ಸಪ್ಪೆಯಾಗಿದೆ; ಮುದಿಯಾಗಿದೆ; ಬಾಗಿದ ಬೆನ್ನು. ಈ ಸಮಯದಲ್ಲಿ ಅದೂ ನೆರವಿಗೆ ಬಾರದಾಯಿತು. ಅದರೊಡನೆ ಒಂದೇ ಒಂದು ಬೆಂಕಿಕಡ್ಡಿ ಇತ್ತು. ರೇಜಿನಿಂದ ಎರಡನ್ನೂ ಬಿಸುಟೆ.

ಈಗ ದೊರೆತದ್ದು ಬರಿಯ ಹಾಳೆಯೊಂದು. ಜತೆಗೆ ಸಣ್ಣ ಪೆನ್ಸಿಲೊಂದು. ಮನಸಿಗೆ ಬಲು ಸೊಗಸೆನಿಸಿತು. ಪದ್ಯ ಬರೆಯಲೇ ಎನಿಸಿತು.

ಜೇಬು ಬರಿಯದಾಗಿತ್ತು. ಹಣವೆಲ್ಲೆಂದು ಹುಡುಕಿದೆ. ಕಿಲುಬುಕಾಸೂ ದೊರೆಯಲಿಲ್ಲ. ಆಫೀಸಿನಲ್ಲಿ ಹಣ ಕಟ್ಟಲಿಕ್ಕಲ್ಲವೇ ನಾನು ಬಂದುದು.—

—ಶರತ್.

———o———

# ಸ್ಥಾನ ಬಲ

---

"ಸ್ವಾಮಿಾ ಪೋಸ್ಟುಮಾಸ್ಟರೇ, ದಯವಿಟ್ಟು ಈ 'ರಿಜಿಸ್ಟರ್ಡ್' ಕಾಗದ ಈ ದಿವಸವೇ ಹೋಗುವಹಾಗೆ ಮಾಡಿಕೊಡಬೇಕು.......ಬಹಳ ಹುರ್ತಿನದು......"

"ಹೊತ್ತಾಗಿ ಹೋಯಿತಲ್ರೀ, ಇವತ್ತು ಆಗುವುದಿಲ್ಲ. ನಾಳೆ ತೆಗೆದು ಕೊಂಡು ಬನ್ನಿ."

"ಸ್ವಲ್ಪ ಮನಸ್ಸು ಮಾಡಿ, ಸ್ವಾಮಿ! ಇನ್ನೂ ಮೂರು ಹೊಡೆದಿಲ್ಲ........"

"ಆಗುವುದಿಲ್ಲ ಎಂದು ಹೇಳಿದರೆ ಗೊತ್ತಾಗುವುದಿಲ್ಲವೇನ್ರೀ! ನಾನು ಇವತ್ತಿನ ಲೆಕ್ಕವನ್ನೆಲ್ಲಾ ಮುಗಿಸಿಬಿಟ್ಟದ್ದೇನೆ."

"ಆದರೆ ಇನ್ನೂ ಮೂರು ಘಂಟೆ ಆಗಿಲ್ಲವಲ್ಲ ಸ್ವಾಮಿ!"

"ಏನು, ಬಹಳ ಕಾನೂನು ಮಾತನಾಡುತ್ತಿದ್ದೀರಿ! ಘಂಟೆ ಎಷ್ಟು ಎಂದು ನನಗೇ ಹೇಳಿಕೊಡುವುದಕ್ಕೆ ಬರುತ್ತೀರಲ್ಲ! ನೀವು ಇನ್ನೂ ಮೊದಲೇ ಬರುವುದಕ್ಕೇನಾಗಿತ್ತು?"

"ಕಾನೂನಲ್ಲಾ, ಮಹಾಸ್ವಾಮಿ! ದಯವಿಟ್ಟು ಕೋಪಿಸಬೇಡಿ. ಮೂರು ಘಂಟೆ ಇನ್ನೂ ಹೊಡೆದಿಲ್ಲವಲ್ಲಾ ಎಂದು ಜ್ಞಾಪಿಸಿದ್ದೆ, ಅಷ್ಟೆ. ಇದಾದರೋ ಬಹಳ ಅವಸರದ ಕಾಗದ—ತಲೆ ಹೋಗುವಂಥಾ ವಿಚಾರ. ಅದಕ್ಕಾಗಿ ತಮ್ಮನ್ನು ಇಷ್ಟು ಕೇಳಿಕೊಳ್ಳುವುದು........"

"ಕಾಗದವನ್ನು ತೂಕಮಾಡಿ ನಮ್ಮ ಕಡತವನ್ನೆಲ್ಲಾ ಬರೆಯುವ ಹೊತ್ತಿಗೆ ಮೂರು ಘಂಟೆ ಆಗಿಯೇ ಆಗುತ್ತೆ. ಅದೋ ನೋಡಿ, ಆಗಿಯೇ ಹೋಯಿತು!"

ಮೂರು ಘಂಟೆ ಹೊಡೆಯುವುದು. ಪೋಸ್ಟ್ ಮಾಸ್ಟರು ಕಾಗದವನ್ನು ಕಿಟಕಿಯ ಹೊರಗೆ ಎಸೆದು, ಕಿಟಕಿಯ ಬಾಗಿಲನ್ನು 'ಡಬ್' ಎಂದು ಮುಚ್ಚುವರು.

ನೀವಾದರೋ, ಪೆಚ್ಚುಮೋರೆ ಹಾಕಿಕೊಂಡು ಕಾಗದವನ್ನು ತೆಗೆದು ಜೇಬಿನಲ್ಲಿಟ್ಟುಕೊಂಡು ಪೋಸ್ಟ್‌ಮಾಸ್ಟರನ್ನು ಮನಸಾರೆ ಬೈದುಕೊಳ್ಳುತ್ತಾ ಬಂದ ದಾರಿ ಹಿಡಿಯುವಿರಿ. 'ಇವನು ನಮ್ಮ ಕೈಲಿ ಸಿಕ್ಕಲಿ' ಎಂದು ನೀವಂದುಕೊಳ್ಳ ಬಹುದು. ಆದರೇನು? ಪೋಸ್ಟ್‌ಮಾಸ್ಟರಿಗಿದೆ—ಸ್ಥಾನಬಲ!

* * *

ಪೋಲೀಸಿನವನು—"ಯಾರವ್ವಾ ಅಲ್ಲಿ! 'ಫುಟ್‌ಪಾತ್' ಮೇಲೆ ನಡೆಯಿರಿ!"

ಮಡಿ ಹೆಂಗಸು—"ಅಪ್ಪಾ, ಆ ನಿಮ್ಮ ಪುಟ್ಪಪಾತು ಶೀರ ಪುಟ್ಪದು—ಒಂದು ಗೇಣಗಲ ಕೂಡಾ ಇಲ್ಲ. ಅಲ್ಲದೆ, ಅದರ ಮೇಲೆಲ್ಲಾ ಬೇಕಾದಷ್ಟು ಹೇಸಿಗೆ. ನಾನು ಹೇಗೆ ಆ ಗಲೀಜನ್ನೆಲ್ಲಾ ತುಳಿದುಕೊಂಡು ಹೋಗಲಿ?"

"ಗಲೀಜೋ ಗಿಲೀಜೋ, ಅದೆಲ್ಲಾ ನನಗೆ ಗೊತ್ತಿಲ್ಲ. 'ಫುಟ್‌ಪಾತ್' ಮೇಲೆಯೇ ಹೋಗಬೇಕು, ಇಲ್ಲದಿದ್ದರೆ ನಿಮ್ಮನ್ನು ಪೋಲೀಸ್ಟೇಷನ್ನಿಗೆ ಹಿಡಿದು ಕೊಂಡು ಹೋಗಬೇಕಾಗುತ್ತೆ. ತಿಳಿಯಿತೇ!"

"ಅಯ್ಯೋ, ದೇವರೇ, ಯಾಕಪ್ಪಾ ಈ ರಸ್ತೆಯಲ್ಲಿ ಬಂದೆ!" ಅಂದು ಕೊಳ್ಳುತ್ತಾ, ಮಡಿ ಹೆಂಗಸು, ಮಾರಿಗೊಂದು ಕಾಲು, ಮೈಲಿಗೊಂದು ಕಾಲು ಹಾಕುತ್ತಾ, ಆ ಅಮೇಧ್ಯಮಯವಾದ 'ಪುಟ್ಪಪಾತಿ'ನಲ್ಲಿಯೇ ಹೋಗಬೇಕು. ನಿರ್ವಾಹವಿಲ್ಲ. ಪೋಲೀಸಿನವನಿಗಿದೆ—ಸ್ಥಾನಬಲ!

* * *

ಅವಸರವಸರದಲ್ಲಿ ಓಡಿಬಂದ ಪ್ರಯಾಣಿಕನು ಟಿಕೆಟ್ ಕಿಟಕಿಯ ಹತ್ತಿರ ನಿಂತು ಕೈಲಿರುವ ನಾಣ್ಯದಿಂದ ಕಿಟಕಿಯ ಮೇಲೆ 'ಟಕಟಕ' ಎಂದು ಶಬ್ದ ಮಾಡುತ್ತಾ "ಸಾರ್! ವೇಳೆಯಾಯಿತು, ದಯವಿಟ್ಟು ಟಿಕೆಟ್ಟು ಕೊಡಿ" ಎನ್ನು ವನು. ಟಿಕೆಟ್ ಗುಮಾಸ್ತೆಯಾದರೋ ತಲೆ ಬಗ್ಗಿಸಿಕೊಂಡು ಏನೋ ಬರೆ ಯುತ್ತಲೇ ಇರುವನು. ಪ್ರಯಾಣಿಕನು ಒಂದು ಕಾಲಿನ ಮೇಲೆಯೇ ನಿಂತು ಮತ್ತೆ ಮತ್ತೆ ಶಬ್ದ ಮಾಡುವನು. 'ಸಾರ್! ಸಾರ್!' ಎಂದು ಕೂಗುವನು. ಪುಣ್ಯಾತ್ಮ ಗುಮಾಸ್ತೆಯು ತಲೆಯೆತ್ತಿ ನೋಡುವುದೇ ಕಷ್ಟ. ನೋಡಿದರೂ, ಕಿಟಕಿಯ ಬಳಿ ನಿಂತಿರುವ ಪ್ರಯಾಣಿಕನು ಅವನಿಗೆ ಅದೃಶ್ಯನಂತೆಯೇ. ಕಡೆಗೆ ಎಂಜಿನ್ನಿನ ಸಿಳ್ಳು ಕೇಳಿಬಂದಾಗ ಪ್ರಯಾಣಿಕನ ಕಾಟವನ್ನು ತಡೆಯಲಾರದೆ ಎದ್ದುಬಂದು ದುಡ್ಡಿಸುಕೊಂಡು ಟಿಕೆಟ್ಟನ್ನು ಪ್ರಯಾಣಿಕನ ಕಡೆಗೆಸೆಯುವನು. ಇವನು ಅದನ್ನು ಬುತ್ತಿ ಹಿಡಿದು ಎದ್ದೆನೋ ಬಿದ್ದೆನೋ ಎಂದು ರೈಲಿಗೆ ಓಡುವನು. ರೈಲು ಸಿಕ್ಕಿದರೆ ಅವನ ಪುಣ್ಯ. ಸಿಕ್ಕದಿದ್ದರೆ, ಟಿಕೆಟ್ ಗುಮಾಸ್ತೆಗೆ ಸಹಸ್ರ ನಾಮಗಳು. ಆದರೇನು, ಆ ಗುಮಾಸ್ತೆಗಿದೆ—ಸ್ಥಾನಬಲ!

* * *

ಎ. ಆರ್. ಪಿ. ಸೈರನ್ನಿನ ಗೋಳುರಾಗ ಆಗ ತಾನೆ ಶುರು. ಪುರೋಹಿತ ಗುಂಡಾಚಾರ್ರು ಕಚ್ಚೆಯನ್ನು ಸರಿಮಾಡಿಕೊಳ್ಳುತ್ತಾ ಬೇಗ ಬೇಗ ಓಡುತ್ತಿದ್ದಾರೆ. ಇನ್ನೇನು ಶ್ರಾದ್ಧದ ಮನೆ ಕಂಡುಬರುವುದರಲ್ಲಿ, ಎದುರಿಗೆ ಯಮರೂಪಿಯಾದ ಎ. ಆರ್. ಪಿ. ಅಧಿಕಾರಿ!

" ಸ್ವಾಮಿ, ತಿಳಿಯಲಿಲ್ಲವೆ? ಎ. ಆರ್. ಪಿ. ಕೂಗಿದ್ದುದು? ದಯವಿಟ್ಟು ಆ 'ಟ್ರೆಂಚಿ'ನಲ್ಲಿ ಹೋಗಿ ಅವಿತುಕೊಳ್ಳಿ."

" ಅಪ್ಪಾ, ಮನೆ ಅದೋ ಅಲ್ಲಿ ಕಾಣಿಸುತ್ತಿರುವುದೇ. ದಯವಿಟ್ಟು ಅಲ್ಲಿಗೇ ಹೋಗಿ ಅವಿತುಕೊಳ್ಳಲು ಬಿಟ್ಟುಬಿಡು!"

"ಅದೆಲ್ಲಾ ಆಗುವುದಿಲ್ಲ. ನೀವು ಆ ಟ್ರೆಂಚಿನಲ್ಲಿ ಒಡನೆಯೇ ಹೋಗಿ ಕೂಡಬೇಕು?"

"ಅಯ್ಯಾ, ಆ ಟ್ರೆಂಚು ತುಂಬಾ ಅಸಹ್ಯಕರವಾಗಿದೆ. ನಾನು ಒಬ್ಬರ ಮನೆಗೆ ಶ್ರಾದ್ಧ ಮಾಡಿಸುವುದಕ್ಕೆ ಹೋಗಬೇಕು. ಮೈಲಿಗೆಯವರ ಜತೆಯಲ್ಲಿ ಆ ಟ್ರೆಂಚಿನಲ್ಲಿ ಹೇಗೆ ಕೂಡುವುದು? ಅಲ್ಲಿ ಕಾಣಿಸುವುದೇ ನಾನು ಹೋಗಬೇಕಾಗಿರುವ ಮನೆ. ದಯವಿಟ್ಟು ಹೋಗಗೊಡು, ಪುಣ್ಯ ಬರುತ್ತೆ!"

" ಖಂಡಿತವಾಗಿಯೂ ಆಗುವುದಿಲ್ಲ. ನೀವು ನಮ್ಮ ಮಾತು ಕೇಳದಿದ್ದರೆ, 'ಡಿಫೆನ್ಸ್ ಆಫ್ ಇಂಡಿಯಾ' ಪ್ರಕಾರ ಶಿಕ್ಷೆ ಮಾಡಿಸುತ್ತೇವೆ." ಅಷ್ಟು ಹೊತ್ತಿಗೆ ಸೈರನ್ನಿನ ಗೋಳು ರಾಗವೂ ನಿಲ್ಲುತ್ತೆ. ಎಲ್ಲೆಲ್ಲೂ ನಿಶ್ಶಬ್ದ. ಪೋಲೀಸಿನವರ ಮತ್ತು ಎ. ಆರ್. ಪಿ. ಯವರ ಸಿಳ್ಳುಗಳು ಮಾತ್ರ ಕೇಳಿಬರುತ್ತೆ. ಮೂರು ಜನ ಎ. ಆರ್. ಪಿ. ಅಧಿಕಾರಿಗಳು ಮತ್ತು ಒಬ್ಬ ಪೋಲೀಸಿನವನು ಸೇರಿ ಪುರೋಹಿತಾಚಾರ್ರನ್ನು ಎ. ಆರ್. ಪಿ. ಗುಂಡಿಯಲ್ಲಿ ಹಾಕಿ ಅದುಮುತ್ತಾರೆ. ಆಚಾರ್ರು ಹಲ್ಲು ಹಲ್ಲು ಕಡಿಯಬಹುದು. ಆದರೇನು, ಆ ಎ.ಆರ್. ಪಿ. ಅಧಿಕಾರಿಗಿದೆ—ಸ್ಥಾನಬಲ!

*                    *                    *

'ಸ್ಥಾನಬಲದ' ಮುಂದೆ ಯಾವುದೂ ಇಲ್ಲ ಎಂಬುದೇ ನಮ್ಮ ಸೋಮಣ್ಣನ ಸಿದ್ಧಾಂತ. ಮೊನ್ನೆ ಆಸ್ಪತ್ರೆಯಲ್ಲಿ ಅವನನ್ನು ನೋಡುವುದಕ್ಕೆ ಹೋದಾಗ ಕೇಳಿದೆ "ಏನು ಸೋಮಣ್ಣ, ಹೇಗಿದೆ ಸ್ಥಾನಬಲದ ಪರಿಣಾಮ? ಸ್ಥಾನಬಲವಿದ್ದರೂ, ಗುರುಬಲವಿಲ್ಲದಿದ್ದರೆ ಪ್ರಯೋಜನವಿಲ್ಲಪ್ಪಾ" ಎಂದು. ಏಕೆಂದರೆ, ಸೋಮಣ್ಣನು ಈ ಸ್ಥಾನಬಲದ ತರ್ಕದ ಮೇಲೆಯೇ ಆಸ್ಪತ್ರೆಗೆ ದಾಖಲಾದದ್ದು. ಈಗ ಹದಿನೈದು ದಿವಸಗಳ ಹಿಂದೆ ಸೋಮಣ್ಣನು ಬೈಸಿಕಲ್ ಮೇಲೆ ಹೋಗುತ್ತಿರುವಾಗ ಹಿಂದೆ ಮಿಲಿಟರಿ ಲಾರಿಯೊಂದು ಧಡಾಯಿಸಿಕೊಂಡು ಬಂತು. ಸೋಮಣ್ಣನು ರಸ್ತೆ ವಿಧಿಗಳನ್ನು ಅನುಸರಿಸಿ ಹೋಗುತ್ತಿದ್ದುದರಿಂದ "ನಾನು ಹೆದರಿಕೊಂಡು ಈ ಮಿಲಿಟರಿ ಲಾರಿಯವನಿಗೇಕೆ ಜಾಗ ಕೊಡಬೇಕು? ನಿಧಾನವಾಗಿ ಹಿಂದೆ ಬಂದು ಜಾಗವಿದ್ದಲ್ಲಿ ಮುಂದೆ ಹೋಗಲಿ, ನನಗಿದೆ ಸ್ಥಾನಬಲ" ಎಂದು ಅಸಡ್ಡೆಯಿಂದಿದ್ದ. ಆದರೆ, ಈ ಸ್ಥಾನಬಲದ ತರ್ಕವನ್ನರಿಯದ ಲಾರಿಯವನು ಹಿಂದಿನಿಂದ ಬೈಸಿಕಲ್ಲಿಗೆ ಢಿಕ್ಕಿ ಹೊಡದೇ ಹೊಡೆದ! ಬೈಸಿಕಲ್ಲು ಅಪ್ಪಚ್ಚಿಯಾಯಿತು. ಸೋಮಣ್ಣ ಅಮ್ಮಚ್ಚಿಯಾಗಿ ನಾಲ್ಕು ಮಾರು ದೂರದಲ್ಲಿ ಬಿದ್ದನು.

ಸರಿ, ಆಸ್ಪತ್ರೆಗೆ ಸಾಗಿಸಿದ್ದಾಯಿತು. ದೇವರ ದಯದಿಂದ ಜೀವ ಉಳಿಯಿತು. ದವಡೆಯ ಎರಡು ಹಲ್ಲುಗಳು, ಮೂಗಿನ ತುದಿಯ ಒಂದು ಚೂರು, ಕೈಯ್ಯಿನ ಎರಡು ಮೂಳೆಗಳು ಮಾತ್ರ ಪುಡಿಪುಡಿಯಾಗಿದ್ದವು! ಪೋಲೀಸಿನವರು ಯಥಾ ಪ್ರಕಾರ ಕ್ರಮಗಳನ್ನೆಲ್ಲಾ ಜರುಗಿಸಿದರು. ಕೊನೆಯ ತೀರ್ಪು ಏನೆಂದರೆ, ಸೋಮಣ್ಣನದೇ ತಪ್ಪೆಂದು! ಅದಕ್ಕೇ ಗುರುಬಲವಿರಬೇಕೆಂದು ಸೋಮಣ್ಣನಿಗೆ ಹೇಳಿದುದು.

ಅದಕ್ಕೆ ಸೋಮಣ್ಣನು "ಹಾಗಲ್ಲಾ, ಬೀರಣ್ಣ, ಸ್ಥಾನಬಲದ ತತ್ವವು ಯಾವಾಗಲೂ ಸರಿಯೇ. ನಾನು ಮಾಡಿದ ತಪ್ಪೇನೆಂದರೆ, ನಾನು ಎಷ್ಟು ನಿಯಮಗಳನ್ನನುಸರಿಸಿದ್ದರೂ ಸ್ಥಾನಬಲವು ಮಾತ್ರ ಲಾರೀಗೇ ಇತ್ತು ಎಂಬು ದನ್ನು ಮರೆತದ್ದು! ಇರಲಿ, ನನಗೆ ವಿರೋಧವಾಗಿ ತೀರ್ಪು ಕೊಟ್ಟವರೆಲ್ಲಾ ಹುಷಾ ರಾಗಿರಲಿ."

"ಏಕೆ, ಏನು ಮಾಡುತ್ತೀಯೆ?"

"ಗೊತ್ತಿಲ್ಲವೆ? ಇನ್ನು ಸ್ವಲ್ಪ ದಿನಗಳಲ್ಲಿಯೇ ಚುನಾವಣೆಗಳು ನಡೆಯು ತ್ತವೆ. ನಾನೊಬ್ಬ ಉಮೇದುವಾರನಷ್ಟೆ. ಚುನಾಯಿಸಲ್ಪಡುವುದು ಖಂಡಿತ. ಆ ಮೇಲೆ ಮಂತ್ರಿ ಪದವಿ ನನಗಲ್ಲದೆ ಮತ್ತಾರಿಗೆ? ನೋಡು, ಮಂತ್ರಿಯಾದ ಮೇಲೆ ನನ್ನ ಭರಾಟೇ! ಆಗ ಮಾಡುತ್ತೇನೆ, ಇವರಿಗೆಲ್ಲಾ ತಕ್ಕಶಾಸ್ತಿ."

"ಏನು ಸೋಮಣ್ಣ, ನೀನು ಮಂತ್ರಿಯಾಗುವುದು ಇದಕ್ಕೇನೆ?"

"ಮತ್ತೇನಯ್ಯಾ, ನಮ್ಮ ಸೇಡುಗಳನ್ನು ಆಗ ತೀರಿಸಿಕೊಳ್ಳದಿದ್ದರೆ ಮತ್ತೆ ಯಾವಾಗ ಸಾಧ್ಯ? ಆಗ ನಮಗಿರುತ್ತೆ—ಸ್ಥಾನಬಲ!"

—ಬೀರಣ್ಣ.

———o———

"ಕೊರವಂಜಿ" ಸಂಪಾದಕರಿಗೆ ವಂದನೆಗಳು. ನಮ್ಮ ಸೋಮಣ್ಣನ "ಸ್ಥಾನಬಲ"ದ ತತ್ವವನ್ನು ಮೇಲೆ ಪ್ರತಿಪಾದಿಸಿರುತ್ತೇನೆ. ಸರಿಯೆಂದು ಕಂಡು ಬಂದರೆ ಪ್ರಕಟಿಸಬಹುದು. ಈ ವಿಚಾರದಲ್ಲಿ ತಮಗಿದೆ—ಸ್ಥಾನಬಲ!

ತಮ್ಮ ವಿಶ್ವಾಸಿ,
ಬೀರಣ್ಣ.

# "ಸೈ ನಳ"

---

ತುಂಬು ದೇಹದ, ದುಂಡು ಮೊಗದ, ಹೂವಿನಂತೆ ಹಗುರವಾದ ಇಡಲಿ ಜೋಡಿಗಳೆರಡು ನನ್ನ ತಟ್ಟೆಯ ಮೇಲೆ ಇದ್ದುವು. ಗಮಗಮಿಸುವ ಚಟ್ನಿಪುಡಿಯು ಒಂದು ಪಕ್ಕದಲ್ಲಿ ತುಪ್ಪದೊಡನೆ ಮೆರೆಯುತ್ತಿತ್ತು. ಹತ್ತಿರದಲ್ಲೇ ಬಲು ಚೆನ್ನಾಗಿ ಮಾಡಲ್ಪಟ್ಟ ಕಾಫಿಯ ವಾಸನೆಯು ಸುಳಿದಾಡುತ್ತಿತ್ತು. ಮುಖ್ಯ 'ದೇವರು ಇದ್ದಾನೆ, ಮೂಲೋಕಗಳಲ್ಲಿ ಎಲ್ಲವೂ ಸುವ್ಯವಸ್ಥೆಯಾಗಿದೆ' ಎಂಬಂತೆ ತೋರುತ್ತಿದ್ದಿತು.

ಮೆಲ್ಲಮೆಲ್ಲಗೆ ಇಡಲಿಯನ್ನು ತಿನ್ನಲಾರಂಭಿಸಿದೆ. ತಿನ್ನುವುದೇನು ಬಂತು? ಬಾಯಿಗೆ ಒಂದು ಚೂರು ಇಡಲಿ ಹಾಕಿದರೆ ಅದೇ ಕರಗಿಹೋಗುವಷ್ಟು ಚೆನ್ನಾಗಿತ್ತು. ಇಡಲಿ ತಿಂದು, ಕಾಫಿ ಚಪ್ಪರಿಸುತ್ತಾ ಕುಡಿದೆ. ಆ ವೇಳೆಗೆ ಯಾರೋ ಪಕ್ಕದಲ್ಲಿ ಬಾಗಿಲ ಬಳಿ ನಿಂತಂತೆ ಕಂಡು ಬಂತು. ಆ ಕಡೆ ತಿರುಗಿದರೆ, ಸೈನಳನು ನಿಂತಿದ್ದನು. ಇಷ್ಟು ಚೆನ್ನಾಗಿ ಇಡಲಿ, ಕಾಫಿ ತಯಾರಿಸಿ ತಂದಿಟ್ಟ, ಅನುಪಮನಾದ ಅಡಿಗೆಯವನೇ ಸೈ ನಳ.

'ಇಡಲಿ ಬಲು ಚೆನ್ನಾಗಿ ಮಾಡಿದ್ದೀಯಾ ಸೈ ನಳ. ಕಾಫಿ ಇಷ್ಟು ಚೆನ್ನಾಗಿದ್ದುದನ್ನು ನಾನು ಕುಡಿದೇ ಇಲ್ಲ' ಎಂದೆ.

'ರಾಯರ ಸಂತೋಷ,' ಎಂದಂದು ತಲೆಬಾಗಿ ನಿಂತ.

'ಏನಾದರೂ ಬೇಕೆ'

'ಏನೂ ಇಲ್ಲ. ನಮ್ಮ ತಾಯಿಯವರಿಗೆ ಸಖ್ತ ಖಾಯಿಲೆಯಂತೆ ಊರಿನಲ್ಲಿ. ಒಂದು ವಾರ ನಮ್ಮ ಹಳ್ಳಿಗೆ ಹೋಗಿ ಆಕೆಯ ಸೇವೆಮಾಡಿ ಹಿಂತಿರುಗುತ್ತೇನೆ.

'ನಿಮ್ಮ ಹಳ್ಳಿ ಎಲ್ಲಿದೆ, ನಿಮ್ಮ ತಾಯಿಯವರನ್ನು ಇಲ್ಲಿಗೇ ಕರೆದುಕೊಂಡು ಬರಬಾರದೇ?'

'ಇಲ್ಲ ರಾಯರೇ ಆಕೆಯು ಬಹಳ ಮುದಿ. ಹಾಗೂ ತುಂಬು ವಯಸ್ಸಿನವರು, ಮಂಗಳೂರಾಚೆ ಹದಿನಾರು ಮೈಲಿ ಬಸ್ಸಿನಲ್ಲಿ ಹೋದರೆ ನಮ್ಮ ಹಳ್ಳಿ ಸಿಗುತ್ತದೆ. ಅಲ್ಲದೆ, ನಿಮ್ಮನೆಯ ಅಡಿಗೆಗೆ ನನ್ನ ಮಗ ನನ್ನೇ ಏರ್ಪಾಡುಮಾಡಿ ಹೋಗುತ್ತೇನೆ. ಆತನು ಬಲು ವಿದ್ಯಾವಂತ. ಇಂಗ್ಲೀಷನ್ನು ಕೂಡ ಓದಿ ಬರೆಯಲು ಕಲಿತಿದ್ದಾನೆ.'

'ತಾಯಿಯ ಖಾಯಿಲೆ ಅಂದ ಮೇಲೆ ನಿನ್ನನ್ನು ಕಳಿಸದೆ ಇರಲು ಆಗುತ್ತದೆಯೇ, ಹೋಗಿಬಾ. ನಿನ್ನ ಮಗನ ಹೆಸರೇನು?

'ಅವನು ಶ್ರೀನಿವಾಸ ಸೈನಳ' ನಾಳೆಯಿಂದ ಅವನೇ ಕೆಲಸವನ್ನೆಲ್ಲಾ ಮಾಡುವಂತೆ ಏರ್ಪಾಡುಮಾಡಿ ಹೋಗುತ್ತೇನೆ.

* *

ಮಾರನೆಯ ದಿನ ಬೆಳಿಗ್ಗೆ ಯಥಾಪ್ರಕಾರ ತಟ್ಟೆಯ ಮೇಲೆ ಎರಡು ಇಡಲಿ, ಹತ್ತಿರ ಒಂದು ಬಟ್ಟಲು ಕಾಫಿ ಸಿದ್ಧ. ಇಡಲಿಯು ಯುದ್ಧಕ್ಕೆ ಹೋಗಿ ಬಂದಂತಿತ್ತು. ಚಟ್ನಿಪುಡಿಯು ಚಲ್ಲಾ

ಪಿಲ್ಲಿಯಾಗಿತ್ತು, ಅರ್ಧವೆಲ್ಲಾ ತುಪ್ಪದೊಡನೆ ತಟ್ಟೆಯ ಹೊರಗಡೆಯೇ ಮೆತ್ತುಕೊಂಡಿತ್ತು, ತಿಳಿಯಾದ ವಾಸನೆಯೊಂದು ತಲೆದೋರಿತು. ಅದು ಸಮರ ಕಾಲದ ಎಣ್ಣೆಯದೆಂದು ಕಂಡುಬರಲು ಒಂದೆರಡು ನಿಮಿಷಗಳಾದುವು. ನನ್ನ ಎದೆಯು ಹಾಗೇ ಕುಗ್ಗಿಹೋಯಿತು.

'ಆಚಾರ್ರನ್ನು ಬರಹೇಳು' ಎಂದು ಕೂಗಿದೆ.

'ಆಚಾರ್ರು ಬಂದರು. ಕೇವಲ ಒಂದು ಚಿಕ್ಕ ಹುಡುಗ ಬಂದ.'

'ಅಡಿಗೆಯವನೆಲ್ಲಿ' ಎಂದೆ.

'ನಿನ್ನೆಯೇ ಊರಿಗೆ ಹೋದರು, ಅವರ ಮಗ ನಾನು, ಶ್ರೀನಿವಾಸ.'

ಮರೆತಿದ್ದೆ ಅವನು ಊರಿಗೆ ಹೋಗಿದ್ದು. ಇಡಲಿ ನೋಡಿ ಕುಪಿತನಾಗಿ ಎಲ್ಲವನ್ನೂ ಮರೆತಿದ್ದೆ. ಅಡಿಗೆಯವನು ಬದಲಿ ಇಟ್ಟ ಮಗನು ಕೇವಲ ಹತ್ತು ವರ್ಷದ ಹುಡುಗನೆಂದು ಕನಸಿನಲ್ಲಿಯೂ ಕಂಡಿರಲಿಲ್ಲ. ಚಿಂತಾಕ್ರಾಂತನಾದೆ. ಹುಡುಗನಿಗೆ ನನ್ನ ಮುಖದ ಮೇಲಿನ ನಿರಾಶೆಯು ಕಂಡುಬಂದಿರಬೇಕು.

'ನನಗೆ ಅಡಿಗೆ ಚೆನ್ನಾಗಿ ಬರುತ್ತದೆ. ಮುಂಗಾಭಾತು, ಬಾಂದಾಭಾತು, ಮೂಲಂಗಾಭಾತು ಎಲ್ಲವನ್ನೂ ಕಲಿತಿದ್ದೇನೆ, ಭಕ್ಷ್ಯಗಳನ್ನೂ ಕೂಡ ಮಾಡುತ್ತೇನೆ. ಎಂದು ನನಗೆ ತಿಳಿಯದ ಹೆಸರುಗಳನ್ನೆಲ್ಲಾ ಹೇಳಿದ.'

ಇರಬಹುದೇನೊ ಎಂದು ಸುಮ್ಮನಾದೆ. ಕಷ್ಟಕಾಲದಲ್ಲಿ ತಲೆಗೆ ಕೈಕೊಟ್ಟು ಮರುಗುವುದಲ್ಲದೇ ಇನ್ನೇನು ತಾನೇ ಸಾಧ್ಯ. ಅಂತೇ ತಲೆಗೆ ಕೈಕೊಟ್ಟು ಕುಳಿತೆ.

* *

ನನ್ನ ಜೀವಮಾನದಲ್ಲೇ ಅಂತಹ ಕಷ್ಟ ಕಾಲವನ್ನು ಯಾವಾಗಲೂ ಅನುಭವಿಸಲಿಲ್ಲ. ಆ ತೆರನಾದ ತಿಂಗಳೊಂದನ್ನು ಕಳೆದೆ ಕಡೆಗೆ ನನ್ನ ಹೆಂಡತಿ ಮಕ್ಕಳೂ ತಿರುಗಿಬಿದ್ದರು. ಈ ಊಟ ತಿಂಡಿ ಇನ್ನು ಅಸಾಧ್ಯ. ಇನ್ನು ಯಾರನ್ನಾದರೂ ಕರಿಸಿ, ಇಲ್ಲವಾದರೆ ನಾನೇ ಅಡಿಗೆ ಮಾಡುತ್ತೇನೆ. ಈ ಹುಡುಗ ನನ್ನು ಕಟ್ಟಿಕೊಂಡು, ಹೊಟ್ಟೆ ತುಂಬುವುದು ಇನ್ನು ಅಸಾಧ್ಯ. ಇನ್ನು ಕೆಲವು ದಿವಸ ಇದೇ ಊಟ ಮಾಡಬೇಕಾದರೆ, ಮುಂದೆ ಊಟದ ಆಶೆಯೇ ಇಲ್ಲವಾಗುತ್ತದೆ. ಒಳ್ಳೆ ಅಡಿಗೆ ತಂದಿಟ್ಟರೂ ತಿನ್ನಲಾಗುವುದಿಲ್ಲ.

ನನಗೂ ಬೇಜಾರಾಗಿತ್ತು. ಶ್ರೀನಿವಾಸ ನೈನಳನನ್ನು ಬರಹೇಳಿದೆ. ನಿಮ್ಮಪ್ಪ ಒಂದು ವಾರದಲ್ಲಿ ಬರುತ್ತೇನೆಂದು ಹೋದವನು ಬರಲೇ ಇಲ್ಲ. ಸಾಕ್ಷಾತ್ ನಳನಂತಿದ್ದ. ಅವನ ಬರುವಿಕೆಯನ್ನು ಎದುರು ನೋಡುತ್ತಾ ನಿನ್ನ ಅಡಿಗೆಯನ್ನು ಎದುರಿಸುತ್ತಿದ್ದೆ. ಇನ್ನು ಅದು ಅಸಾಧ್ಯ. ನೀನೂ ಊರಿಗೆ ಹೋಗು. ನಾನು ಬೇರೆ ಏರ್ಪಾಡುಮಾಡಿಕೊಳ್ಳುತ್ತೇನೆ.

'ರಾಯರ ಖುಷಿ' ಎಂದಂದು ಹಾಗೆಯೇ ಮಾಯವಾದ ಹುಡುಗ.

* *

ಮೂರನೆಯ ದಿನ ಬೆಳಿಗ್ಗೆ ತುಂಬು ದೇಹದ ದುಂಡು ಮೊಗದ ಹೂವಿನಂತೆ ಹಗುರವಾದ ಇಡಲಿ ಜೋಡಿಗಳೆರಡು ನನ್ನ ತಟ್ಟೆಯ ಮೇಲೆ ಇದ್ದುವು. ಗಮಗಮಿಸುವ ಚಟ್ನಿಣಿ ಪುಡಿಯು ಒಂದು ಪಕ್ಕದಲ್ಲಿ ತುಪ್ಪದೊಡನೆ ಮೆರೆಯುತ್ತಿತ್ತು. ಹತ್ತಿರದಲ್ಲೇ ಬಲು ಚೆನ್ನಾಗಿ

ಮಾಡಲ್ಪಟ್ಟ ಕಾಫಿಯ ವಾಸನೆಯು ಸುಳಿದಾಡುತ್ತಿತ್ತು. ಮುಖ್ಯ ದೇವರು ಇದ್ದಾನೆ. ಮೂಲೋಕಗಳಲ್ಲಿ ಎಲ್ಲವೂ ಸುವ್ಯವಸ್ಥೆಯಾಗಿದೆ ಎಂಬಂತೆ ತೋರಿ ಬಂತು.

'ಅಡಿಗೆಯಾಚಾರ್ರು ಹಿಂದಕ್ಕೆ ಬಂದ ರೆ. ಯಾವಾಗ ಬಂದರು. ಕರಿ' ಎಂದು ಕೂಗಿದೆ.

ಹಿರಿಯ ಸೈನಳನು ಬಾಗಿಲಬಳಿ ಮುಖ ತೋರಿದ.

'ಇದೇನಯ್ಯಾ ಇಷ್ಟು ಬೇಗ ಬಂದೆ' ಎಂದೆ.

ಅವನು ಮಾತನಾಡಲೇ ಇಲ್ಲ. ಇವನನ್ನು ಕೆಣಕಿದರೆ ತಿರುಗಿ ಎಲ್ಲಿ ಹೊರಟು ಹೋಗುವನೋ ಎಂದು ಸುಮ್ಮನಾದೆ.

ಕಾಫಿ ತಿಂಡಿ ಮುಗಿಯುವ ಹೊತ್ತಿಗೆ ಕಿರಿಯ ಸೈನಳನು ಬಾಗಿಲ ಬಳಿ ಬಂದ. ಹೋಗಿಬರುವೆನೆಂದು ಹೇಳಲು ಬಂದಿದ್ದ ಎಲ್ಲಿಗೆ ಹೋಗುತ್ತೀ, ಏನು ಮಾಡುತ್ತೀ ಎಂದು ಸಾಮಾನ್ಯ ಪ್ರಶ್ನೆಗಳನ್ನು ಕೇಳಿದೆ.

'ಪೇಟೆಯಲ್ಲಿರುವ ವೈಷ್ಣವಾನಂದ ಭವನಕ್ಕೆ ಅಡಿಗೆಯ ಕೆಲಸಕ್ಕೆ ಹೋಗುತ್ತೇನೆ. ಈ ಒಂದು ತಿಂಗಳೂ ನಮ್ಮ ತಂದೆ ಅಲ್ಲಿ ಕೆಲಸಕ್ಕಿದ್ದರು. ನೀವು ನನ್ನನ್ನು ಕಳಿಸೇಬಿಡುತ್ತೇನೆ ಎಂದು ಖಂಡಿತವಾಗಿ ಹೇಳಿದಾಗ ಅವರಿಗೆ ಹೋಗಿ ಹೇಳಿದೆ. ಅದಕ್ಕೇ ಅವರು ಅಲ್ಲಿಗೆ ನನ್ನನ್ನು ಕಳಿಸಿ, ತಾವು ಹಿಂತಿರುಗಿದರು.'

'ಅಂದರೆ, ಆತ ಊರಿಗೆ ತಾಯಿ ಖಾಯಿಲೆಗೆ ಹೋಗಿರಲಿಲ್ಲವೇ?'

'ಇಲ್ಲ.'

'ಇದೇ ಊರಿನಲ್ಲಿದ್ದು ಹೋಟಲಿನಲ್ಲಿದ್ದನೇ'

'ಹೌದು'

'ಇದು ಯಾಕೆ ಹೀಗೆ ನನಗೆ ಮೋಸ'

'ಅವರು ಹೋಟಲಿನಲ್ಲಿದ್ದರೆ, ಅವರ ಸಂಬಳದ ಜೊತೆಗೆ ನನ್ನ ಸಂಬಳವೂ ಸೇರುತ್ತಿತ್ತು. ಅದಕ್ಕಾಗಿ'

'ನಾನು ಅವಾಕ್ಕಾದೆ. ಒಂದೇ ಊರಿನಲ್ಲಿದ್ದು ಕೂಡ ನಾನು ಒಂದು ತಿಂಗಳು ಆ ಅಡಿಗೆಯನ್ನು ಕಳೆದುಕೊಂಡೆನಲ್ಲಾ ಎಂದು ಕೊರಗಿದೆ. ಹಿರಿಯ ಸೈನಳನ್ನು ಕೇಳುವಂತಿಲ್ಲ. ಕೇಳಿದರೆ ತಿರುಗಿ ಅವನು ಪರಾರಿಯಾದರೆ? ಸುಮ್ಮನಾದೆ.

ಮಧ್ಯಾಹ್ನದ ರಸಗವಳ, ಸಾಯಂಕಾಲದ ಸೊಬಗಿನ ತಿಂಡಿ. ರಾತ್ರಿಯ ಕನಸೂಟ ಎಲ್ಲವನ್ನೂ ನೆನೆಸುತ್ತಾ ಕಳೆದುಹೋದುದನ್ನು ಕೆದಕಿದರೆ ಸುಖವಿಲ್ಲನೆಂದು ಸುಮ್ಮನಾದೆ.

——೧——

# ಚಿನಕುರಳಿ

### ೧. ಸಾಹಸದ ಕಾರಣ

"ನನ್ನ ವಿಷಯ ಗೊತ್ತೇನ್ರಿ ನಿಮಗೆ?........ನೋಡಿ, ಬಿಡದಿಯಿಂದ ಬೆಂಗಳೂರಿಗೆ........ಹತ್ತೊಂಭತ್ತು ಮೈಲಿ........ಒಂದೇ ಘಂಟೆಯಲ್ಲಿ ಓಡಿ ಬಂದಿದ್ದೇನೆ........ಭೂಪ!" ಎಂದು ನೆರೆದ ಮಹಾಜನರ ಮುಂದೆ ಆತ್ಮ ಪ್ರಶಂಸೆ ಮಾಡಿಕೊಳ್ಳುತ್ತಿದ್ದ ಒಬ್ಬ.

ಆ ಗುಂಪಿನಲ್ಲಿದ್ದ ಮತ್ತಾವನೋ ಒಬ್ಬ ತಲೆಹೋಕ ಮುಂದೆ ಬಂದು—"ಹೌದ್ರೀ, ಅವನು ಹೇಳುವುದು ನಿಜ; ನಾನೇ ಕಣ್ಣಾರೆ ನೋಡಿದೇನೆ........" ಎಂದು ಹೇಳಿ ನಿಲ್ಲಿಸಿದಾಗ ಜನರು ಮತ್ತೂ ಆಶ್ಚರ್ಯಚಕಿತರಾಗಿ, ಬೆರಗಾಗಿ, ಬಿಟ್ಟ ಕಣ್ಣು ಬಿಟ್ಟುಕೊಂಡು ಆ 'ಸಾಹಸಿ'ಯನ್ನೇ ನೋಡುತ್ತಿದ್ದರು! ತಲೆಹೋಕ ಇನ್ನೂ ಮುಂದುವರಿಸಿದ—"ಆದರೆ, ಅವನನ್ನು ಅಟ್ಟಿಸಿಕೊಂಡು ಹೋಗುತ್ತಿದ್ದ ನನ್ನ ರೇಗಿದ ಗೂಳಿ ಅಕಸ್ಮಾತ್ತಾಗಿ ಕೆಂಗೇರಿಯಲ್ಲೇ ನಿಂತುಬಿಟ್ಟರೂ, ಇವನು ಬೆಂಗಳೂರಿನ ತನಕ ಓಡಿ ಬಂದಿದ್ದಾನೆ, ಬೆಪ್ಪ!" ಎಂದು ಹೇಳಿ ಆ ಗುಂಪಿನಲ್ಲೆಲ್ಲೋ ಮರೆಯಾಗಿಬಿಟ್ಟ!

### ೨. ಇವನ ಸಲಹೆ

ಜನ ಬಹಳವಾಗಿ ಸೇರಿದ್ದರು. ಇಬ್ಬರು "ಹೆಸರಾದ" ಸಂಗೀತಗಾರರ ಕಛೇರಿಯೆಂದ ಮೇಲೆ ಕೇಳಬೇಕೆ?

ಆ ಇಬ್ಬರು ಸಂಗೀತಗಾರರು ಒಳಗೆ ರೂಮಿನಲ್ಲಿ ಕುಳಿತಿದ್ದರು. ಅವರಲ್ಲೊಬ್ಬ, ನೆರೆದಿದ್ದ ಜನರನ್ನು ಕಿಟಿಕಿಯ ಮೂಲಕವೇ ನೋಡಿ, ಬೆವರೊರೆಸಿಕೊಳ್ಳುತ್ತಾ ಮತ್ತೊಬ್ಬರ ಕಡೆ ತಿರುಗಿ—"ಸ್ವಾಮಿ! ದಯವಿಟ್ಟು ಕಛೇರಿಯನ್ನು ನೀವೇ ಪ್ರಾರಂಭಮಾಡಿ. ನೀವಾದ ಮೇಲೆ ನಾನು ಹಾಡುತ್ತೇನೆ" ಎಂದರು.

ಅದಕ್ಕೆ ಮತ್ತೊಬ್ಬರು—"ಸ್ವಾಮಿಯ ಇಷ್ಟ, ಆಗಬಹುದು. ಕಛೇರಿಯಲ್ಲಿ ಮೊದಲು ಹಾಡುವ ಹಿರಿಯ ಗೌರವವನ್ನು ನನಗಾಗಿ ಬಿಟ್ಟುಕೊಟ್ಟಿದ್ದೀರಿ. ಅದಕ್ಕಾಗಿ ನನ್ನ ವಂದನೆಗಳು. ಆದರೆ ಆ ಗೌರವಕ್ಕೆ ನಾನು ಸರ್ವಥಾ ಯೋಗ್ಯನಲ್ಲವೆಂದೇ ನನ್ನ ಭಾವನೆ" ಎಂದು ವಿನಯವಾಗಿ, ನಮ್ರರಾಗಿ ಹೇಳಿದರು.

ಅದಕ್ಕೆ ಈತ ಸ್ವಲ್ಪ ಒರಟಾಗಿಯೇ—"ಅದು ಗೊತ್ತಿದೇರೀ! ನೀವು ನನಗೆ ಹೇಳಬೇಕಾದ್ದಿಲ್ಲ! ನಾನು ಏಕೆ ಹಾಗೆ ಹೇಳಿದೆ ಅಂದರೆ........ಪ್ರೇಕ್ಷಕರು ತಂದಿರುವ ಚಪ್ಪಲಿಗಳೆಲ್ಲ ನಾನು ಹಾಡುವ ಹೊತ್ತಿಗೆ ಮುಗಿದುಹೋಗಿರಲಿ ಅಂತ; ಅಷ್ಟೆ!" ಎಂದು ಹೇಳಿ ಮತ್ತೊಮ್ಮೆ ಬೆವರೊರಸಿಕೊಂಡರು!

—ಬಿ. ವಿ. ಸು.

# ಕಾಫಿಯ ವೈವಿಧ್ಯ

---

ಹೆಸರು ನೋಡಿ, “ಇದೇನವಾಂತ್ರ” ಅಂತ ಬೇಸರ ಬೇಡಿ. ನಮ್ಮೆಲ್ರೊಬ್ರು, ‘ವೈವಿಧ್ಯ’ವನ್ನ ವೈಧವ್ಯಾಂತ ಓದಿ “ಇದೇನ್ಹುಚ್ಚು, ಕಾಫೀಗೂ ಉಂಟೇ ವೈಧವ್ಯಾ”ಂತ ದಬಾಯಿಸಿಯೇ ಬಿಟ್ರು. ನಾನೇನೋ ಇಂಗ್ಲೀಷಿನ ‘Variety’ ಅನ್ನೋದ್ನ ‘ವೈವಿಧ್ಯಾ’ಂತ ಭಾಷಾಂತ್ರ ಮಾಡ್ಬಿಟ್ಟೆ. ಆದ್ರೆ ಈ ಲೇಖನ ಓದ್ಮುಗಿಸಿದ್ಮೇಲೆ, ವೈವಿಧ್ಯಕಿಂತ ವೈಧವ್ಯವೇ ಮೇಲೂಂತೀರೇನೋಂತ ನನ್ಮನ್ಸಿಗ್ತೋರುತ್ತೆ. ಹಾಗೇನಾದ್ರೂ ನಿಮಗ್ತೋರಿ ಬಂದ್ರೆ ಮುಂದಿನ್ಸಲ ತಪ್ದೆ ಕೊರವಂಜಿ ಕೈಲಿ ಕಣಿ ಹೇಳಿಸ್ಬಿಡಿ.

ಸಕ್ರೆ, ನಮ್ದೇಶ್ದಲ್ಲಿ ಲಕ್ಷಾಂತ್ರ ಟನ್ಗಳಷ್ಟು ತಯಾರಾಗ್ತಿದ್ರೂ, ಯುದ್ಧದಿಂದ, ಬಂದೇಬಿಡ್ತಲ್ಲಾ ಅದಕ್ಕೂ ಅಭಾವ; ಅಭಾವಾತ್ ರೇಷನ್ನು. ಅನೇಕ್ರ ಮನೆಗ್ಳಲ್ಲಿ ಇದು ನಿಮಿತ್ತ ಕಾಫೀಗೆ ಅರ್ಧ ವೈಧವ್ಯ ಸಂಭವಿಸಿ, “ಬೆಲ್ಲದ್ಕಾಫೀ”ಂತಾಯ್ತು. ಇದಾದ್ಮೇಲೆ, ಅಂದ್ರೆ ಅಲ್ಲ, ಇದಕ್ಕೊದ್ಲೇನೇ, ರಾಮನ ರಾಜ್ಯಭಾರದಂತೆ, ದೇಶ ಸುಭಿಕ್ಷದಿಂದಿದ್ದಾಗ, ಈ ಅಭಾವನೆಗಳೆಲ್ಲಾ ತಲೆದೋರ್ದೇ ಇದ್ದಾಗಾ, ಉಪ್ಪಿನ್ಕಾಫೀಕೂಡ ತಯಾರಾಗಿದೆ. ಇದ್ನಿಜ್ವೇಂತ ನೀವು ಕೇಳ್ಬಹುದು. ಮುಂದೋದಿ ಗೊತ್ತಾಗುತ್ತೆ.

ಇದು ಯಾವಾಗಾಂತೀರೋ, ನಮ್ ಸ್ನೇಹಿತ್ನೊಬ್ಬನ ಮದುವೆ ಪ್ರಕರಣದಲ್ಲಿ. ಅಲ್ಲಿ ನನ್ನ ಓಡಾಟ್ವೂ ಜಾಸ್ತಿಯಾಗಿಯೇ ಇತ್ತು. ನಾನು ನಿರ್ವಹಿಸ್ಕೊಂಡ, ಅಥ್ವಾ ನಂಗೆ ನಿರ್ವಹಿಸಿದ್ದ ಕೆಲಸಗಳಲ್ಲಿ ಅತಿಥಿ ಅಭ್ಯಾಗತರ್ನ ಉಪಚರಿಸೋದೂಂತ. ಇಂಥಾ ಸಮಯಗ್ಳಲ್ಲಿ ಉಪಚಾರಕ್ಮುಖ್ಯ ಕಾಫೀ ಪ್ಲಸ್ ಇಡ್ಲಿಯೋ, ಉಪ್ಪಿಟ್ಟೋ ತಾನೇ? ಸರಿ, ಬಂದ್ರೂ ಆ ಅತಿಥಿಗ್ಳೂ, ಸ್ನೇಹಿತ್ರೂ, ಬಂಧುಬಳಗಗ್ಳೂನ್ನಿಸ್ಕೊಂಡೋರು—ಆ ಕಾಲ ಆಗೋಹೊತ್ಗೆ ಸರ್ಹೋಯ್ತೂನ್ನಿ, ಪೀಪಾಯಿಗ್ಳಲ್ಲಿ ಕಾಫಿ ಮಾಡೀ ಮಾಡೀ ಕುಡ್ಸೋಕೆ ಕಲ್ಗಚ್ಚಿನ್ಹಾಗೆ....ಎಷ್ಟೂಂತ ಸ್ಟಾಕಿರುತ್ತೆ? ಅಡಿಗೆಯವ್ರು protest ಮಾಡಿಯೇ ಬಿಟ್ರು ನಮ್ಕೈಲಾಗೋಲ್ಲಾಂತ. ಅಷ್ಟ್ಹೊತ್ಗೆ ಸರಿಯಾಗಿ ಬಂದ ನಾಗೇಶ, ಮದುವಣಿಗ್ನ ಸ್ನೇಹಿತ. ಹಸೆಮಣೆ ಮೇಲೆ ಜೋಕಾಗಿ ಕೂತ್ಕೊಂಡು ತನ್ನಿರೀಭಾವವನ್ನೈದನ್ಕೈಲಿ ಹೇಳ್ಕಳಿಸಿದ, ಮದುವಣಿಗ ಸೋಮು. ಈಗ್ತಾನೇ ಬಂದ್ನಾಗೇಶನಿಗೆ ಕಾಫೀ ಆಯ್ತೋಂತ, ಇದೇನೋ ಬಂತಲ್ಲಪ್ಪಾ ಪೀಕ್ಲಾಟಾಂತ, ರಭಸದಿಂದ ಒಳಕ್ಹೋದ, ಸೋಮು ಅಕ್ಕ, ತನ್ನ ಅತ್ತೆ ಮನೆಯವರಿಗೆ ತಯಾರಿಸಿ ಆರಿಸ್ತಿದ್ದ ಎರಡು ಲೋಟ ಕಾಫೀನ ಹೇಗೋ ಉಪಾಯ್ದಿಂದ ತೆಗೆದ್ಕೊಂಡು ಬಂದು, ನಾಗೇಶನ ಮುಂದೆ ಒಂದು ಲೋಟ ಹಿಡಿದು, “ಕುಡಿಯಯ್ಯಾ ಮಹಾಪುರುಷ! ಬಸವನ್ಗುಡೀಯಿಂದ್ಬಂದಿದ್ದೀ, ಸಾಲದ್ದಕ್ಕೆ ಬಿಸಲ್ಬೇರೆ” ಅಂತಂದೆ. ಲೋಟ ಕೈಗೆತ್ಕೊಂಡು ಕಾಫಿಯ ಒಂದ್ಗುಟುಕು ಕುಡಿದು ಚಪ್ಪರಿಸಿದ, ನಾಗೇಶ. ಮತ್ತೊಂದು ಗುಟುಕೂ

ಹೋಯಿತು —“ಇದೇನೋ ಇಡೂ, ಉಪ್ಪುಪ್ಪು ಕಾಫೀ?” ಅಂತ ಅಬ್ಬರಿಸಿದ. ಸದ್ಯ ಆ ‘ರೂಮ್ನ’ಲ್ಲಿ ಯಾರೂ ಇರ್ಲಿಲ್ಲ.......ನಂಗೂ ನಾಗೇಶನಿಗೂ ದೋಸ್ತಿ ಹೆಚ್ಚು. ಇದ್ರಿಂದ, ವನಗೆ ರೇಗಿತು —ಅಡಿಗೆಯವರು ಕೈಸೋತ್ರು, protest ಮಾಡಿದ್ಮೇಲೆ, ಅವರ ಕೈವಾಡವೇ ಇಲ್ಲದ್ಕಾಫೀನ ಉಪ್ಪೊಂತಾನಲ್ಲಾಂತ. “ಸುಮ್ನೆ ಕುಡಿಯೋ, ಕೇಳ್ದೋರ್ನ್ಕ್ಯಾರು” ಅಂತ ಪ್ರತಿ ಗರ್ಜನೆ ಮಾಡಿದೆ. “ಇನ್ಮಾತ್ನಾಡಿದ್ರೆ ಉಳಿಗಾಲ್ವಿಲ್ಲಾ”ಂತ್ಲೋ ಏನೋ, ಆ ಗ್ಲಾಸಿನ ಕಾಫೀನ ಪೂರ್ತಿ ಖಾಲಿ ಮಾಡಿದ, ಕಣ್ಮುಚ್ಕೊಂಡು. ಇವನು ಕಾಫೀ ಕುಡಿದ್ಮುಗ್ಸೋ ಹೊತ್ಗೆ, ಮತ್ತೊಬ್ಬ ಸ್ನೇಹಿತ ಸೈಕಲ್ ಸವಾರಿಯಿಂದ ಸುಸ್ತಾಗಿ ಬೆವರು ಸುರಿಸ್ತಾ, ಕರವಸ್ತ್ರಕ್ಕೆ ಅದನ್ನೇ ಅಭಿಷೇಕ ಮಾಡ್ತಾ, ಬಂದಿಳಿದ....ಅವನ್ಗೂ ಯಥಾಪ್ರಕಾರ್ವಾಗಿ, ಮಿಕ್ಕಿದ್ದ ಒಂದ್ಲೋಟ ಕಾಫೀನ ತಂದಿಟ್ಟೆ. ರುಚಿ ನೋಡಿದ್ದೇ ತಡ, ನಿರ್ದಾಕ್ಷಿಣ್ಯ ಪುರುಷಾ ಅವ್ನು, ಒದರಿದ ತನ್ನ ದೊಡ್ಡ ಗಂಟ್ಲಲ್ಲಿ, “ಇದೇನೋ ಬೆಪ್ಪೇ! ಕಾಫೀಗೆ ಸಕ್ರೆ ಹಾಕೋ ಬದಲು Table salt ಹಾಕಿರೋ ಹಾಗಿದೇ!....ಈ ಗೂಬೇ ಕುಡಿದ್ಬಿಟ್ನೋ ಇದನ್ನೇನೇ?... ಆಗ ನಂಗೂ ‘ಅಯ್ಯೋ’ ಎನಿಸಿ, ಇಬ್ರು ಹೇಳಿದ್ಮೇಲೇ ಕಾಫೀಗೆ ಉಪ್ಪು ಬಿದ್ದಿರೋದೇ ನಿಜಾಂತ ಒಳಕ್ಕೋಡಿ, ವಿಚಾರಿಸಿದೆ. ಸೋಮು ಅಕ್ಕನವರಿಗೆ ಆಶ್ಚರ್ಯವಾದ್ರೂ, ಒಳಗೆಲ್ಲೋ ಇದ್ದ ತಮ್ತಾಯೀ ಹತ್ರ, “ಅಡಿಗೇ ಮನೇ ‘ಅಲ್ಮಾರ್ನಲ್ಲಿದ್ದ ಚಿಕ್ಕ ಡಬ್ಬಲ್ಲಿದ್ದದ್ದೇನು, ಸಕ್ರೇನೇ?” ಅಂತ್ಕೇಳಿದರು. ಅವ್ರು, ‘ಅಲ್ವೇ, ಮಂಕೂ! ಅದು Table salt ಬೆರಸಿ ಕೊಟ್ಬಿಟ್ಯಾ ಕಾಫೀಗೇ?”ಂತ ಮೆತ್ತಗೆ ಕಿರಿಚಾಡ್ತಿದ್ದದ್ದು ನಸ್ಕಿವೀಗ್ಬಿತ್ತೋ ಇಲ್ವೋ, “ಕ್ಷಾರದ್ಕಾಫೀ” ಕುಡಿದ ನಾಗೇಶ್ನಲ್ಲಿ ನಾನು ಕ್ಷಮಾಪ್ಣೆ ಬೇಡಿದ್ದೂ ಬೇಡಿದ್ದೇ. ಸೋಮೂ ಅಕ್ಕ, ಆಕೆ ಅತ್ತೇ ಮನೆಯೋರಿಗೆ ಆ ಕಾಫೀ ಕೊಡಿಸ್ದೇ ಇದ್ದದ್ದಕ್ಕೆ ನನ್ನನ್ನ ಹೊಗಳಿದ್ದೂ ಹೊಗಳಿದ್ದೆ.

ಈಗ್ಲೂ, ನಾಗೇಶ ನಮ್ಮನೇಗೆ ಬಂದಾಗ ಕಾಫೀ ಗೀಫೀ ಕೊಟ್ರೆ ಮೊದಲು, “ಉಪ್ಪುಗಿಪ್ಪು ಹಾಕಿಲ್ಲಾ ತಾನೇ?”ಂತ ಕೇಳಿಯೇ ಕುಡ್ಯೋದು. ಈಗವ್ನು ಬಹಳ ಹುಷಾರಿ.

—ನಾ. ಶಂ.

——o——



"ಸೀಗೇಕಾಯಿ ಬೆಲೆ ಹೀಗೆ ಏರುತ್ತಿರುವಾಗ ನೀವು ಮೀಸೆ ಬೇರೆ ಬಿಟ್ಟದೀರಲ್ಲಾ ! ಏನು ಹೇಳೋಣ ?"



— ಕಲ್ಯಾಣಿಯವರ —

ಪೌರಾಣಿಕ

● ಕನ್ನಡ ●

ವಾಕ್ಚಿತ್ರ

# ಕೃಷ್ಣ ಸುಧಾಮ

— ನಟವೃಂದ —

ಎಸ್. ಡಿ. ಸುಬ್ಬಲಕ್ಷ್ಮಿ – ಮೀನಾಕ್ಷಿ ಮಧುಗಿರಿ – ಕುಮಾರಿ ಚಂದ್ರಮ್ಮ

ಬೆಳ್ಳಾವೆ ನರಹರಿಶಾಸ್ತ್ರಿ – ಎ. ಎಸ್. ಶೇಷಾಚಾರ್ – ಮಾಸ್ಟರ್ ವಿಶ್ವಂ

ಮುಂತಾದವರು

●

ಕೆ. ಸುಬ್ರಹ್ಮಣ್ಯಂ, ಬಿ.ಎ., ಬಿ.ಎಲ್.,

ಮತ್ತು

ಜಿ. ಪಟ್ಟು ಅಯ್ಯರ್‌ರವರ

ದಿಗ್ದರ್ಶನ

●

**ನಿಮ್ಮೂರಿನ ಚಿತ್ರಮಂದಿರದಲ್ಲಿ ಪ್ರದರ್ಶನವನ್ನು**

**ನಿರೀಕ್ಷಿಸಿರಿ**

ಡಿಸ್ಟ್ರಿಬ್ಯೂಟರ್ಸ್ :—

## ದಿ ಕರ್ನಾಟಕ ಫಿಲಮ್ಸ್ ಲಿ.,

ಮೈಸೂರು ದೇಶ, ಉತ್ತರ ಮತ್ತು ದಕ್ಷಿಣ ಕೆನರಾ, ಕೊಡಗು ಮತ್ತು ನೈಜಾಂ ರಾಷ್ಟ್ರಗಳಿಗೆ.

**ಮೈಸೂರು ಫಿಲಂ ಕಾರ್ಪೋರೇಷನ್**

ಬೊಂಬಾಯಿ ಪ್ರಾಂತ, ಆಂಧ್ರ ಮತ್ತು ತಮಿಳು ನಾಡುಗಳಿಗೆ




## ಲೋಧ್ರ—ಗರ್ಭಾಶಯ ಟಾನಿಕ್

ಅಕ್ರಮ ಮುಟ್ಟು, ಬಂಜೆತನ, ಗರ್ಭಜವಾಯು, ನಿದ್ರಾಭಂಗ, ಅಜೀರ್ಣ, ಮಲಬದ್ಧತೆ, ಕೆಮ್ಮು, ತಲೆನೋವು, ಬೆನ್ನುನೋವು ಮುಂತಾದುವನ್ನು ವಾಸಿಮಾಡುವುದು.

## ಅರ್ಕ—ಶ್ರೇಷ್ಠ ಜ್ವರ ನಿವಾರಿಣಿ

ಇಂಫ್ಲೂಯಂಜಾ, ಟೈಫಾಯಿಡ್, ಮಲೇರಿಯ ಮುಂತಾದ ಎಲ್ಲಾ ವಿಧವಾದ ಜ್ವರಗಳನ್ನೂ ಪ್ಲೀಹ ಮತ್ತು ಪಿತ್ತಕೋಶ ರೋಗಗಳನ್ನೂ ಗುಣಪಡಿಸುವುದು.

## ಅಮೃತ—ರಕ್ತಶುದ್ಧಿ ಟಾನಿಕ್

ಎನೀಮಿಯ, ಮಲಬದ್ಧತೆ, ಅಜೀರ್ಣ, ನಿಶ್ಶಕ್ತಿ, ಬುದ್ಧಿಮಾಂದ್ಯ, ಎದೆಯ ನಿಶ್ಶಕ್ತಿ, ಜ್ಞಾಪಕಶಕ್ತಿ ಇಲ್ಲದಿರುವದು, ದೃಷ್ಟಿಮಾಂದ್ಯ, ತಲೆ ತಿರುಗುವುದು, ಚರ್ಮ ರೋಗಗಳು ಮುಂತಾದುವನ್ನು ವಾಸಿಮಾಡುವುದು.

ಏಜಂಟರು :

**ಸಿಟಿ ಮೆಡಿಕಲ್ ಅಂಡ್ ಜನರಲ್ ಏಜನ್ಸಿ,**

**ಚಿಕ್ಕಪೇಟೆ, : : : ಬೆಂಗಳೂರು ಸಿಟಿ.**

ಮುರ್ಲಿ ಮೂವಿಟೋನ್ ಅವರ

# ಕುರ್ಬಾನಿ

ಪ್ರೇಮ ನಿಸ್ಸ್ವಾರ್ಥತೆಯ ಹೃದಯ ಚಿಮ್ಮುವ ಕಥೆ



ದುರ್ಗಾಖೋಟೆ — ಕೌಶಲ್ಯ
ವಾಸಂತಿ — ಈಶ್ವರ್ ಲಾಲ್



— "ಪ್ಯಾಸ್" ಚಿತ್ರವನ್ನಿತ್ತ —
ರಾಂ ದರ್ಯಾನಿ ಅವರೇ ದಿಗ್ದರ್ಶಕರು



ಪ್ರತಿಯೊಬ್ಬರೂ "ನೋಡಲೇ ಬೇಕಾದ" ಚಿತ್ರ

| | |
|---|---|
| ವೆಲ್ಲಿಂಗ್ಟನ್<br>ಮದ್ರಾಸ್ | ಸರಸ್ವತಿ<br>ಬೆಜವಾಡ |

ಇಲ್ಲಿ ಈಗ ಪ್ರದರ್ಶಿಸಲ್ಪಡುತ್ತಿದೆ.



| | | |
|---|---|---|
| ಪ್ಯಾರಮೌಂಟ್<br>ಬೆಂಗಳೂರು | ನ್ಯೂ ಚಿತ್ರ<br>ಮಂಗಳೂರು | ಒಲಿಂಪಿಯಾ<br>ಮೈಸೂರು |

ಇಲ್ಲಿ ಶೀಘ್ರದಲ್ಲಿಯೇ ಪ್ರದರ್ಶಿಸಲ್ಪಡುತ್ತದೆ.



ಗುಡ್‌ವಿನ್ ಪಿಕ್ಚರ್ಸ್ ಕಾರ್ಪೊರೇಷನ್
ಬೆಂಗಳೂರು – ಬೆಜವಾಡ – ಟ್ರಿಚ್ಚಿ – ಎರ್ನಾಕುಲಂ.

---

ನೋಡಲೇ ಬೇಕಾದ ಚಿತ್ರಗಳು

# ಪಂತುಲಮ್ಮ

ಶ್ರೀ ರಾಮಬ್ರಹ್ಮಂರವರ ಉತ್ತಮ ತಯಾರಿಕೆ

ಸರಸ್ವತಿ ಫಿಲಮ್ಸ್‌ರವರ ತೆಲುಗು ವಾಕ್ಚಿತ್ರ



| | | |
|---|---|---|
| ಇಙ್ಕಾರ್ | | ಮೇರ ಗಾವ್ |
| ಲೀಲಾ ದೇಸಾಯ್ |  | ಛಾಯಾದೇವಿ |

---

ವಿವರಗಳಿಗೆ—

ಚಂದ್ರ ಫಿಲ್ಮ್ಸ್ ಲಿಮಿಟೆಡ್

ಗಾಂಧಿನಗರ, ಬೆಂಗಳೂರು

— ಇವರಿಗೆ ಬರೆಯಿರಿ

Printed by B. S. Iyengar, Bangalore City.
Publisher—B. N, Gupta, Editor—M. SHIVARAM.